# ತಲೆ ಹರಟೆ

(೨೮ ಹಾಸ್ಯ ಪ್ರಬಂಧಗಳು)



**ನಾಡಿಗೇರ ಕೃಷ್ಣರಾಯ**

ಅ. ನ. ಕೃಷ್ಣರಾಯರ ಮುನ್ನುಡಿಯೊಂದಿಗೆ



ಸತ್ಯಶೋಧನ ಪ್ರಕಟನ ಮಂದಿರ
ಬೆಂಗಳೂರು ನಗರ
೧೯೪೭

## ಬೆಲೆ

| ಸಾದಾ ಪ್ರತಿ | ಕ್ಯಾಲಿಕೋ ಪ್ರತಿ |
| --- | --- |
| **ಒಂದೂಕಾಲು ರೂಪಾಯಿ** | **ಎರಡೂಕಾಲು ರೂಪಾಯಿ** |


**ಮೊದಲನೆಯ ಮುದ್ರಣ ೧೯೪೪**

**ಎರಡನೆಯ ಮುದ್ರಣ ೧೯೪೭**









ಮುದ್ರಕರು :

ಈಸ್ಟರ್ನ್ ಪ್ರೆಸ್

ಜಯಚಾಮರಾಜರಸ್ತೆ, ಬೆಂಗಳೂರು ೨.

# ಮುನ್ನುಡಿ

ನಾಡಿಗೇರ ಕೃಷ್ಣರಾಯರ 'ತಲೆಹರಟೆ' ಯಲ್ಲಿ ಬಂದಿರುವ 'ಮುನ್ನುಡಿಗಳು' ಪ್ರಬಂಧವನ್ನು ಓದಿದಮೇಲೆ ಯಾರಾದರೂ ಮುನ್ನುಡಿ ಬರೆಯುವುದಕ್ಕೆ ಸ್ವಲ್ಪ ಹಿಂದುಮುಂದು ನೋಡಬೇಕಾಗುತ್ತದೆ. ಆದರೆ ಅಂತಹ ಅಳುಕು ನನಗಿಲ್ಲ. ಕೃಷ್ಣರಾಯರು ವರ್ಣಿಸುವ ವರ್ಗದ ಸಾಹಿತಿಗಳ ಪಂಕ್ತಿಗೆ ಅವರು ಸೇರಿಲ್ಲ; ಮುನ್ನುಡಿಕಾರರ ಪಂಕ್ತಿಗೆ ನಾನು ಸೇರಿಲ್ಲ.

'ಪ್ರಜಾಮತ' ಪತ್ರಿಕೆಯ ಭವ್ಯವಾದ ದೀಪಾವಳಿ ಸಂಚಿಕೆಗಳನ್ನು ನೋಡಿದವರೂ, ಪ್ರಜಾಮತ, ದೇಶಬಂಧು ವಾರಪತ್ರಿಕೆಗಳನ್ನು ಬಿಡದೆ ಓದುವವರೂ ನಾಡಿಗೇರರು ಯಾರು ಎಂದು ಕೇಳಹೋಗುವುದಿಲ್ಲ ಇವರು ಹಲವು ಗ್ರಂಥಗಳನ್ನು ಬರೆದು ಹೆಸರಾಂತ ಹಿರಿಯ ಸಾಹಿತಿಗಳಿಂದ ಅಭಯ ವಚನ ಪಡೆದು ಸಾಹಿತ್ಯರಂಗದಲ್ಲಿ ತಮ್ಮದೇ ಆದ ಒಂದು ಸ್ಥಾನವನ್ನು ಗಳಿಸಿಕೊಂಡಿಲ್ಲ. ಇವರ ಸಾಹಿತ್ಯ ಹುಟ್ಟಿರುವುದು ಪತ್ರಿಕೆಯ ಕಾರ್ಯಾಲಯದಲ್ಲಿ ಬೆಳಿಗ್ಗೆಯಿಂದ ಸಂಜೆಯವರೆವಿಗೆ ಗಾಣದೆತ್ತಿನಂತೆ ದುಡಿಯುತ್ತಿದ್ದಾಗ. ಬಾಳ ಬೇಳಿಗೆಗೆ ಅನ್ನ ಹೇಗೆ ಮುಖ್ಯವೋ ಹಾಗೆ ನಗೆಯೂ ಮುಖ್ಯ ಎಂಬುದು ನಾಡಿಗೇರರು ಕಂಡುಂಡಿರುವ ಸತ್ಯ. ಆದರೆ ನಿತ್ಯ ಜೀವನದ ಕಲ್ಲುಗಾಣಕ್ಕೆ ಸಿಕ್ಕಿದ ಈ ಲಳ ಪೌಂಡಿನ ಪ್ರಾಣಿ ಇಂತಹ ಹಾಸ್ಯ ಮನೋವೃತ್ತಿಯನ್ನು ಬೆಳಸಿಕೊಂಡು ಬಂದು 'ನಕ್ಕು ನಗಿಸುವಾ ನಗೆ ಲೇಸು' ಎಂಬ ತತ್ವವನ್ನು ಸತ್ಯ ಮಾಡಿರುವುದು ಇಂದಿನ ಯುಗದ ಒಂದು ಪವಾಡ. ಪರಿಸ್ಥಿತಿಯ ಸಂಕೋಲೆ ಮುರಿದು ಜೀವನದ ವಿಕಾಸವನ್ನು ನಗೆಯ ಮೂಲಕ ಸಾಧಿಸುವ ಈ ಶ್ರಮಜೀವಿಯನ್ನು ನಾನು ಪ್ರಸಿದ್ಧ ಸಾಹಿತಿಯೆನ್ನಲಾರೆ; ಆದರೆ ಸಿದ್ಧ ಸಾಹಿತಿಯೆನ್ನದಿರಲಾರೆ.

ನಾಡಿಗೇರರ ಸಾಹಿತ್ಯ ವಿಕಾಸ ಪಡೆದುದು [illegible]ದಿಂದಲ್ಲ, ವಿದ್ಯಾಬಲದಿಂದಲ್ಲ. ಅನುಭವದಿಂದ, ಬಟ್ಟೆಯ ಅಂಗಡಿ [illegible]. [illegible]

ಕಂಟ್ರ್ಯಾಕ್ಟರ್ಗಿರಿ, ಶಾನುಭೋಗಗಿರಿ, ಲಾಯರ್ ಗುಮಾಸ್ತಗಿರಿ, ಹೋಟೆಲ್ ವ್ಯವಸ್ಥಾಪಕ, ಕಂಪೆನಿಯ ನಟ, ಪತ್ರಿಕಾ ವ್ಯವಸಾಯಿ, ಭದ್ರಾವತಿ ಕಬ್ಬಿಣ ಕಾರ್ಖಾನೆಯಲ್ಲಿ ಕೂಲಿ, ಮುದ್ರಣಾಲಯದ ಮೇಲ್ವಿಚಾರಕ– ಇವು ಕೆಲವು ನಾಡಿಗೇರರ ಜೀವನದ ಮೈಲಿಗಲ್ಲುಗಳು ಇಂತಹ ಚಿತ್ರಮಯ ರಸಪೂರ್ಣ ಬಾಳನ್ನು ಬಾಳಿದ ವ್ಯಕ್ತಿ ಜೀವನದ ರನ್ನಗನ್ನಡಿಯಾದುದೇ ನಚ್ಚರಿ! ಬಾಳಿನ ಕಹಿಯನ್ನು ಮರೆತು, ಅದರ ಹಿಂದೆ ಎಲ್ಲೋ ಅಂಟಿ ಕೊಂಡಿರುವ ಅಲ್ಪಸ್ವಲ್ಪ ಸಿಹಿಯನ್ನು ಸವಿದು, ಬಾಳನ್ನೇ ಉದಾರ ದೃಷ್ಟಿ ಯಿಂದ ನೋಡಿ, ತನ್ನ ಕಹಿ ಅನುಭವಗಳನ್ನು ನೆನೆದು ನಗುವ ಮನೋ ಭಾವ ಒಂದು ಹಿರಿಯ ಗುಣ.

ನಾಡಿಗೇರರು ಕನ್ನಡ ಹಾಸ್ಯಕ್ಕೆ ಮೊದಲಿಗರಲ್ಲ, ಆದರೆ ಇವರ ಹಾಸ್ಯ ಕನ್ನಡಕ್ಕೆ ಮೊದಲನೆಯದು. ಕೈಲಾಸಂ, ಜಾಗಿರದಾರರು ಬುದ್ಧಿ ಜೀವಿ ಗಳು, ವಿದ್ಯಾ ಪರಿಣತಮತಿಗಳು. ಕನ್ನಡದಲ್ಲಿಲ್ಲದಿರುವ ವಾಲ್ಟೇರ್, ಷಾ, ಮೋಲಿಯರ್ ಇವರ ಹಾಸ್ಯವೈಖರಿಗಳನ್ನು ಜಾಣ್ಮೆಯಿಂದ ನೆಯ್ದಿದ್ದಾರೆ. ಷೇಕ್ಸ್‌ಪಿಯರಿನ ಫಾಲಸ್ಟಾಫಾಗಲಿ, ಪ್ಲೂಲಾಗಲಿ ಕನ್ನಡದ ಸರಿಗೆ ಪಂಚೆ ಟ್ಟಿ, ಗಡುಗಿನ ಚಪ್ಪಲಿ ಮೆಟ್ಟಿ ಬಂದರೂ ಪರಕೀಯರೆ—ಶಾರ್ಟ್‌ಫ಼್ ವೀಭೂತಿ ಧರಿಸಿ ಬಂದರೂ ಕೃಷ್ಣಾಜಿನ ಹೊದೆದ ಪ್ರಭೃತ್ಯನೇ, ಆದರೆ ಶಕಾರ, ಮಾಣವಕ, ಅಷ್ಟಾವಂಕ, ಚಂಡಿ ಹದಿನಾರಾಣೆ ನಮ್ಮವರು. ಅವರ ಅವಿವೇಕ, ಅವರ ವಕ್ರನೋಟ ನಮ್ಮ ಬಾಳಿನ ಒಂದು ಮುಖ— ರಸಮುಖ. ನೀರಸಜೀವನವನ್ನು ಸರಸ ಮಾಡುವುದು ಅವರ ವಿಪರೀತ ವರ್ತನೆ. ವಿಕೃತಾಚಾರ. ನಾಡಿಗೇರರ ಹಾಸ್ಯ ಈ ಬಗೆಯದು ಕನ್ನಡ ಮಣ್ಣಿನಿಂದ ಪಡೆದ ಕೋಲಾರದ ಚಿನ್ನ.

ನಾಡಿಗೇರರದು ಬುದ್ಧಿಯನ್ನು ಕೆರಳಿಸುವ ಹಾಸ್ಯವಲ್ಲ, ಮನಸ್ಸನ್ನು ಅರಳಿಸುವ ಹಾಸ್ಯ ಇವರು ನೋಯಿಸಿ ನಗಿಸುವ ಗೋಜಿಗೆ ಹೋಗುವು ದಿಲ್ಲ, ನಲಿಸಿ ನಗಿಸುವ ದಾರಿಯನ್ನು ಹಿಡಿಯುತ್ತಾರೆ.

ವಿಚಾರಶೀಲನಿಗೆ ಜೀವನವೊಂದು ಸುಕುಮಾರ ನಾಟಕ. ಸುತ್ತೊಮ್ಮೆ ಕಣ್ಣು ಹೊರಳಿಸಿ ನೋಡಿದಾಗ ನಮ್ಮ ಶ್ರೀಮಂತರು, ಬಡವರು, ನಮ್ಮ ವಿಮಾ ಪ್ರತಿನಿಧಿ ಹೋಟೆಲು ಮಾಲಿಕ, ಚಲನಚಿತ್ರನಟ, ಸಾಹಿತ್ಯಸೇವಕ,

ವೈದ್ಯ, ವಿದ್ಯಾರ್ಥಿಗಳು ಒಂದು ಪ್ರಕರಣದ ಪಾತ್ರಗಳಂತೆ ಕಂಡುಬರುತ್ತಾರೆ. ಹಾಸ್ಯಗಾರ ಅವರನ್ನು ನೋಡಿ ನಗುತ್ತಾನೆ. ಅಣಕದಿಂದಲ್ಲ, ಅಂತಃಕರಣ ದಿಂದ. ತನ್ನನ್ನೇ ನೋಡಿ ನಗುತ್ತಾನೆ.—ತಾನು ಸತ್ತರೆ ಏನು ಪ್ರತಿಕ್ರಿಯೆ ಯಾಗಬಹುದೆಂದು ವಿಚಾರಮಾಡುತ್ತಾನೆ. ಸಾವನ್ನು—ಅದರಲ್ಲಿಯೂ ತನ್ನ ಸಾವನ್ನು ಅಣಕವಾಡುವ ಸ್ಥೈರ್ಯ ಹುಟ್ಟು ನಗೆಗಾರನ ಸಲ್ಲಕ್ಷಣಗ ರಲ್ಲಿ ಒಂದು. ನಗೆಗಾರನಿಗಾದ ಹೋಟೆಲ್ ಅನುಭವ, ವಿಮಾ ಪ್ರತಿನಿಧಿಗಳ ಕೈಯಿಂದ ಪಾರಾದ ಕತೆ ನಮ್ಮ ಜೀವನ ನೋಟವನ್ನೇ ಬದಲಿಸಲು ಸಮರ್ಥವಾಗಿವೆ. ದುಡಿಮೆಯ ಬಗ್ಗೆ ಗೌರವ, ದುಡಿಮೆಗೆ ಬೇಕಾದ ಚಿತ್ತಸ್ಥೈರ್ಯ ಹುಟ್ಟಿಸುತ್ತವೆ.

ನಾಡಿಗೇರರು ಈ ಸಂಗ್ರಹದಲ್ಲಿ ೨೪ ರಸಗುಳಿಗೆಗಳನ್ನು ಕನ್ನಡಿಗರಿಗಿತ್ತಿ ದ್ದಾರೆ ನಮ್ಮ ಜನತೆಯ ಸ್ವಕಪೋಲ ಕಲ್ಪಿತ ವ್ಯಾಧಿಗಳಿಗೆ ಈ ರಸಗುಳಿಗೆ ಗಳು ಸಿದ್ಧೌಷಧವಾಗುವವೆಂದು ನನ್ನ ನಂಬಿಕೆ. ಹಿರಿಯರು, ಕವಿಗಳು, ಶ್ರೀಮಂತರು, ಪ್ರತಿಷ್ಠಿತ ವ್ಯಕ್ತಿಗಳು ಈ ಮಾನದಂಡದಿಂದ ತಮ್ಮನ್ನು ಅಳೆದುಕೊಂಡು ನೋಡಲಿ. ತಾವೇ ನಂಬಿರುವ ತಮ್ಮ 'ದೊಡ್ಡಸ್ತಿಕೆ'ಯ ಎಷ್ಟು ಭಾಗ ಟೊಳ್ಳು—ಎಷ್ಟು ಭಾಗ ಗಟ್ಟಿ ಎಂಬುದು ವೇದ್ಯವಾಗುತ್ತದೆ.

ಬೆಂಗಳೂರಿನ ಪ್ರಗತಿಶೀಲ ಲೇಖಕರ ಸಂಘದ ಸಹ-ಕಾರ್ಯದರ್ಶಿ ಗಳಾಗಿ ನಾಡಿಗೇರರು ತ್ರಿಕರಣಪೂರ್ವಕವಾಗಿ ದುಡಿದಿದ್ದಾರೆ. ಸಂಘದ ಆಶ್ರಯದಲ್ಲಿ ಹಲವು ಕಡೆ ತಮ್ಮ ಪ್ರಹಸನಗಳನ್ನು ಪ್ರದರ್ಶಿಸಿ ಜನತೆಯನ್ನು ಈ ಘೋರ ಭೀಕರ ಸಮಯದಲ್ಲಿ ಉಲ್ಲಾಸಗೊಳಿಸಿದ್ದಾರೆ. ಪ್ರಗತಿಶೀಲ ಸಾಹಿತ್ಯ ಎಲ್ಲೆಡೆಯಲ್ಲಿಯೂ ಜನಪ್ರಿಯವಾಗುವದಕ್ಕೆ ನಾಡಿಗೇರರ ಸೇವೆ ಅಲ್ಪವಾದುದಲ್ಲ. ಹಿರಿಯರು ಹಾರಾಡಲಿ, ಕಿರಿಯ ಸಾಹಿತಿಗಳು ಅವರ ಬಾಲ ಬಡಿಯಲಿ; ಪ್ರಗತಿಶೀಲ ಸಾಹಿತ್ಯ ಮುಂದೆ ನಡೆಯುತ್ತಿದೆ. ನಾಲ್ಕು ಜನ ಹೊಗಳು ಭಟ್ಟರನ್ನು ಅದು ದೂರ ತಳ್ಳಿ ಇಡೀ ಜನತೆಯ ಮುಂದೆ ನಿಂತಿದೆ. ಪ್ರಗತಿಶೀಲ ಸಾಹಿತ್ಯಕ್ಕೆ ಅಂತಹ ವೀರಮುಖವನ್ನು ರಚಿಸುವು ದರಲ್ಲಿ ನಾಡಿಗೇರರೂ ಒಬ್ಬರಾಗಿದ್ದಾರೆ.

ನಾಡಿಗೇರರ ಇನ್ನಿತರ ಕೃತಿಗಳು—ಕಥೆಗಳು, ಹರಟೆಗಳು, ಪ್ರಬಂಧ ಗಳು ಬೇಗ ಕನ್ನಡಿಗರ ಕೈಸೇರಲೆಂದು ನನ್ನ ಹಾರೈಕೆ. ಪ್ರತಿಭೆಯ

ಪ್ರಕಾಶನಕ್ಕೆ, ಪೋಷಣೆಗೆ ಪ್ರಗತಿಶೀಲ ಲೇಖಕರ ಸಂಘ ಹೆಗಲುಗೊಟ್ಟು ನಿಂತಿದೆ ಸಂಘಕ್ಕೆ ಜನತೆಯ ಬೆಂಬಲವಿದೆ--ತರುಣ ಜನಾಂಗದ ಸಂಪೂರ್ಣ ಸಹಕಾರವಿದೆ. ಇದೇ ಸಂಘದ ಆಸ್ತಿ, ಸಂಘದ ಕಾರ್ಯಕ್ರಮಗಳಿಗೆ ಇದೇ ಕ್ರತುಶಕ್ತಿ.

"ಅನ್ನಪೂರ್ಣ"
ಶಂಕರಪುರಂ
ಬೆಂಗಳೂರು ನಗರ

ಅ. ನ. ಕೃಷ್ಣರಾಯ
ಅಧ್ಯಕ್ಷ "ಪ್ರಗತಿಶೀಲ ಲೇಖಕರ ಸಂಘ"
ಬೆಂಗಳೂರು ನಗರ

---

# ಲೇಖಕನ ಎರಡು ಮಾತುಗಳು

ನಮ್ಮ ಜನರಲ್ಲಿ ಹಾಸ್ಯಪ್ರವೃತ್ತಿ ಸಾಲದೆಂಬ ಕೂಗು ಇಂದಿನದಲ್ಲ. ಹಿಂದಿನ ಸಾಹಿತ್ಯಕೃತಿಗಳ ಹಾಳೆಗಳನ್ನು ಮಗುಚಿ ಹಾಕಿದರೆ, ಹಾಸ್ಯದ ಬಗ್ಗೆ ನಮ್ಮವರು ಒಂದು ತರಹ ಮಲತಾಯಿ ಪ್ರೇಮವನ್ನು ತೋರಿದಾರೆಂದು ಹೇಳಬಹುದು. ಶೃಂಗಾರ, ವೀರ, ಕರುಣ ಮುಂತಾದ ರಸಗಳಿಗೆ ಯಾವ ಸ್ಥಾನಮಾನವನ್ನು, ಯಾವ ಮಹತ್ವವನ್ನು ಕೊಟ್ಟಿದ್ದಾರೆಯೋ, ಅದನ್ನು ಹಾಸ್ಯಕ್ಕೆ ಕೊಟ್ಟಿಲ್ಲ

ಈ ಲೋಪಕ್ಕೆ ನಮ್ಮವರ ನಿತ್ಯಜೀವನವೇ ಕಾರಣವೆನ್ನಬಹುದು.. ಇಂಗ್ಲೆಂಡ್, ಫ್ರಾನ್ಸ್ ಮತ್ತು ಅಮೇರಿಕ ಮುಂತಾದ ರಾಷ್ಟ್ರಗಳ ಜನರಿಗೂ, ನಮಗೂ ಹಾಸ್ಯಪ್ರವೃತ್ತಿಯಲ್ಲಿ ಹೋಲಿಸಿಕೊಂಡರೆ ನಾವು ಅನೇಕ ಗಾವುದ ಹಿಂದೆ ಬಿದ್ದಿದ್ದೇವೆಂಬುದು ಕಂಡುಬರುತ್ತೆ. ಇದಕ್ಕೆ ಕಾರಣ ಹೇಳಲು ಅನೇಕರು ಹೊರಟಿದ್ದಾರೆ. ಭಾರತೀಯರು ಆಧ್ಯಾತ್ಮಿಕ ಮನೋವೃತ್ತಿಯವರೆಂದೂ, ಭೌತಿಕವಿಷಯಗಳಿಗೆ ಅಷ್ಟಾಗಿ ಗಮನ ಕೊಡುವವರಲ್ಲವೆಂದೂ, ಕೆಲವರು ಅಭಿಪ್ರಾಯಪಟ್ಟಿದ್ದಾರೆ

ಈ ವಾದ ಏನೇ ಇರಲಿ ನಮ್ಮವರಲ್ಲಿ ಹಾಸ್ಯ ಇಲ್ಲವೆಂಬ ಮಾತು ಸ್ಪಷ್ಟವಾದುದು. ಆಧುನಿಕ ಸಾಹಿತ್ಯದಲ್ಲಿ ಸರ್ವತೋಮುಖ ಬೆಳವಣಿಗೆ ಕಂಡು ಬಂದರೂ ಹಾಸ್ಯ ವಿಭಾಗದಲ್ಲಿ ಇಷ್ಟು ಮುನ್ನಡೆ ಕಾಣುತ್ತಿಲ್ಲ.

ಒಂದು ವಸ್ತು, ಒಂದು ವಿಷಯ, ಒಂದು ವ್ಯಕ್ತಿ ಇವನ್ನು ಎಲ್ಲರೂ ನೇರವಾಗಿ ನೋಡಿದರೆ ಹಾಸ್ಯಗಾರ ಕೊಂಕು ದೃಷ್ಟಿಯಿಂದ ನೋಡುತ್ತಾನೆ. ಕಡ್ಡಿಯನ್ನು ಗುಡ್ಡವಾಗಿ ಮಾಡುತ್ತಾನೆ; ಗುಡ್ಡವನ್ನು ಕಡ್ಡಿಯಾಗಿ ಮಾಡುತ್ತಾನೆ. ಆ ಭರದಲ್ಲಿ ಶಬ್ದಪಲ್ಲಟ ಅರ್ಥಪಲ್ಲಟ ಮಾಡುತ್ತಾನೆ. ಅವನು ನಿಷ್ಠುರಿ, ಖಂಡಿತವಾದಿ, ಸತ್ಯಪ್ರಿಯ. ಸತ್ಯವು ಸಾಮಾನ್ಯವಾಗಿ ಅಪ್ರಿಯವಾದದ್ದು. ಯಾರ ದಯೆ ದಾಕ್ಷಿಣ್ಯಗಳ ಹಂಗಿಗೂ ಒಳಗಾಗದೆ ತಾನು ಕಂಡದ್ದನ್ನು, ತಾನು ಅನುಭವಿಸಿದ್ದನ್ನು ಹೇಳಿ ಬಿಡುತ್ತಾನೆ. ಅವನ ದೃಷ್ಟಿ ಯಾವಾಗಲೂ ಎರಡು ವಿಷಯಗಳ ಮೇಲೆ ನಟ್ಟಿರುತ್ತೆ. ಜನರನ್ನು

ನಗಿಸುವುದು, ನಗಿಸುವದರ ಮೂಲಕ ಅವರ ತಪ್ಪುಗಳನ್ನು ಅವರ ಮುಖಕ್ಕೆ ಹಿಡಿಯುವುದು. ಇದರಿಂದ ಅವನು ಸಮಾಜ ನಿರ್ಮಾಪಕರಲ್ಲಿ ಒಂದು ವಿಶಿಷ್ಟ ಸ್ಥಾನವನ್ನೇ ಗಳಿಸಿಕೊಂಡಿದ್ದಾನೆ.

ನಾನು ಸಮಾಜವನ್ನು ನೋಡಿ ನಕ್ಕಿದ್ದೇನೆ. ಓದುಗರು ಸಹ ನನ್ನಂತೆಯೇ ನಗಬೇಕೆಂದು ನನ್ನ ಆಸೆ. ಅಂತಹ ನಗೆಮಿಂಚುಗಳನ್ನು ಈ ಸಂಕಲನದಲ್ಲಿ ಸಾಕಷ್ಟು ತುಂಬಿದ್ದೇನೆ.

ಈ ಸಂಕಲನದಲ್ಲಿ ಅಳವಡಿಸಲ್ಪಟ್ಟಿರುವ ಕೆಲವು ಹರಟೆಗಳು ಹಿಂದೆ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅವನ್ನು ಪ್ರಕಟಿಸಿದ ಸಂಪಾದಕರಿಗೆ ನನ್ನ ಕೃತಜ್ಞತೆಯನ್ನು ಸೂಚಿಸಬಯಸುತ್ತೇನೆ.

ಈ ಪುಸ್ತಕಕ್ಕೆ ಮುನ್ನುಡಿ ಬರೆದುಕೊಟ್ಟ ಗೆಳೆಯರಾದ ಶ್ರೀ|| ಅ. ನ. ಕೃಷ್ಣರಾಯರು ನನ್ನನ್ನು ಚಿರಋಣಿಯಾಗಿ ಮಾಡಿದ್ದಾರೆ.

## ಎರಡನೆಯ ಮುದ್ರಣದ ಬಗ್ಗೆ............

'ತಲೆ ಹರಟೆ' ಪ್ರತಿಗಳು ಮುಗಿದು ಎರಡು ವರ್ಷಗಳ ಹತ್ತಿರಕ್ಕೆ ಬಂದಿತು. ಕಾರಣಾಂತರಗಳಿಂದ ಎರಡನೆಯ ಮುದ್ರಣಕ್ಕೆ ಅವಕಾಶ ದೊರೆಯಲಿಲ್ಲ. ಬೆಂಗಳೂರಿನ ಸತ್ಯಶೋಧನ ಪ್ರಕಟನ ಮಂದಿರದವರು ಎರಡನೆಯ ಮುದ್ರಣವನ್ನು ಪ್ರಕಟಿಸಿದ್ದಾರೆ. ಅವರಿಗೆ ನಾನು ಋಣಿ.

ಕನ್ನಡ ಸಾಹಿತ್ಯ ಪರಿಷತ್ತಿನವರು ಏರ್ಪಡಿಸಿರುವ ಗ್ರಂಥ ಸ್ಪರ್ಧೆಯಲ್ಲಿ (೧೯೪೫) 'ತಲೆಹರಟೆ'ಗೆ ಬಹುಮಾನ ದೊರಕಿತು. ಪುಸ್ತಕ ಓದಿದವರೆಲ್ಲ ನನ್ನ ಬೆನ್ನು ಚಪ್ಪರಿಸಿದರು. ಪ್ರತಿಗಳೂ ನಿರೀಕ್ಷೆಗಿಂತ ಮುಂಚಿತವಾಗಿ ತೀರಿದವು. ಲೇಖಕ ಇದಕ್ಕಿಂತ ಹೆಚ್ಚೇನು ಬಯಸಿಯಾನು?

ಈಸ್ಟರ್ನ್ ಪ್ರೆಸ್ ಮಾಲಿಕರಾದ ಗೆ|| ಚಿಂತಾಮಣಿಯವರು ಪುಸ್ತಕವನ್ನು ಅಂದವಾಗಿ ಮುದ್ರಿಸಿ, ತಯಾರಿಸಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ಅಭಿವಂದನೆಗಳು

ಬೆಂಗಳೂರು
೧-೭-೧೯೪೭

**ನಾಡಿಗೇರ ಕೃಷ್ಣರಾಯ.**

# ಪರಿವಿಡಿ

## ನಾಡಿಗೇರರ ಇತರ ಕೃತಿಗಳು

**ಅಡ್ಡಾದಿಡ್ಡಿ** (ಹರಟೆಗಳು)

**ಕಸದಬುಟ್ಟಿ** ( ,, )

**ರನ್ನಗನ್ನಡಿ** (ಕಥಾಸಂಗ್ರಹ)

---

# ಹುಲ್ಲುಕಡ್ಡಿ

ಯಾರಾದರೂ ನಮ್ಮನ್ನು ಹೀನಾಯವಾಗಿ ಕಂಡರೆ "ಅವನು ನನ್ನನ್ನು ಹುಲ್ಲಿಗಿಂತ ಕಡೆಯಾಗಿ ನೋಡಿದ" ಎಂದು ಹೇಳುವ ಪರಿಪಾಠ ವನ್ನಿಟ್ಟುಕೊಂಡಿದ್ದೇವೆ. ಅಂದರೆ ಹುಲ್ಲು ಯಾವ ಕೆಲಸಕ್ಕೂ ಬಾರದ ವಸ್ತು ವೆಂಬುದು ಇದರಿಂದ ತಿಳಿದುಬರುತ್ತದೆ. ಇದರಂತೆ "ಮುಳುಗುವ ಮನುಷ್ಯನು ಹುಲ್ಲುಕಡ್ಡಿಯನ್ನು ಹಿಡಿದಂತೆ" ಎಂಬ ಗಾದೆಯ ಮಾತನ್ನು ಬೇರೆ ಮಾಡಿಕೊಂಡಿದ್ದೇವೆ. ಏನೂ ಗತಿಯಿಲ್ಲದುದಕ್ಕೆ ಹುಲ್ಲುಕಡ್ಡಿಯನ್ನು ಹಿಡಿದುಕೊಂಡು ಆ ಮನುಷ್ಯನು ಪ್ರಾಣವನ್ನು ಕಳೆದುಕೊಂಡು, ತನ್ನ ಪ್ರಾಣಹಾನಿಯ ಅಪವಾದವನ್ನು ಹುಲ್ಲಿನ ಮೇಲೆ ಹಾಕುತ್ತಾನೆ. ಪಾಪ ಬಡ ಹುಲ್ಲಿನದೇನು ತಪ್ಪು. ಆ ಮನುಷ್ಯನು ಗಂಭೀರವಾಗಿ ತನ್ನ ಪಾಡಿಗೆ ತಾನು ಸಾಯುವುದನ್ನು ಬಿಟ್ಟು ಹುಲ್ಲುಕಡ್ಡಿಯನ್ನು ಹಿಡಿಯಲು ಪ್ರಯತ್ನಿಸಿ ಪ್ರಾಣ ಕಳೆದುಕೊಂಡು ಎಲ್ಲರೂ ಹುಲ್ಲನ್ನು ದೂರುವಂತೆ ಮಾಡಿದ್ದಾನೆ.

ಮೇಲೆ ಹೇಳಿದುದೆಲ್ಲಾ ಹಿಂದಿನ ಮಾತಾಯಿತು. ಆಧುನಿಕ ಯುಗದ ವಿಜ್ಞಾನಿಗಳು ಹಗಲು ರಾತ್ರಿ ಸಂಶೋಧನೆ ನಡೆಯಿಸಿ ಹುಲ್ಲು ಮನುಷ್ಯನು ತಿನ್ನಬಹುದಾದ ಯೋಗ್ಯವಾದ ಆಹಾರವೆಂದು ತೀರ್ಮಾನಿಸಿ ದ್ದಾರೆ. ಇನ್ನು ವಿಜ್ಞಾನಿಗಳ ತೀರ್ಮಾನವನ್ನು ವಿರೋಧಿಸುವ ದಾಷ್ಟಿಕ ನಮ್ಮಲ್ಲಿಲ್ಲ. ಈಗಲೂ ಸಹ 'ವಿಟಾಮಿನ್' ಥಿಯರಿ ಒಂದು ಜಾರಿಯಲ್ಲಿದೆ ಯಷ್ಟೇ? ಒಳಗಿನ ತಿರುಳಿಗಿಂತಲೂ ಮೇಲಿನ ಸಿಪ್ಪೆಯೇ ಪುಷ್ಟಿಕರ ವಾದುದು ಎಂಬುದು ಈ ಪ್ರಮೇಯದ ತಿರುಳು. ನಾನು ಸ್ವಲ್ಪ ತೆಳು ವಾದ ಆಸಾಮಿ, ೮೫ ಪೌಂಡ್‌ಗಳಿಗಿಂತ ಹೆಚ್ಚಿಗೆ ತೂಗುವುದಿಲ್ಲ. ಮೀಸೆ ಬೋಳಿಸಿಕೊಂಡು ರೈಲಿನಲ್ಲಿ ಅರ್ಧ ಟಿಕೆಟ್ ತೆಗೆದು ಪ್ರಯಾಣ ಮಾಡಿದರೆ ಯಾವ ಟಿಕೆಟ್ ಚೆಕ್ ಮಾಡುವವನೂ ನನ್ನನ್ನು ಹಿಡಿಯುವುದಿಲ್ಲ.

ಮೊದಲು ತೆಂಗಿನ ಚಿಪ್ಪು, ಬಾದಾಮಿ ಸಿಪ್ಪೆ ಮುಂತಾದುವನ್ನು ತಿಂದು ಪುಷ್ಟಿ ಹೊಂದಲು ಪ್ರಯತ್ನಿಸಿ ಎರಡು ದವಡೆ ಹಲ್ಲುಗಳನ್ನೂ, ನಾಲ್ಕು ಮುಂದಿನ ಹಲ್ಲುಗಳನ್ನೂ ಮುರಿದುಕೊಂಡುದಾಯಿತು ಇದಕ್ಕಿಂತಲೂ ಹಗುರವಾದ ಸಿಪ್ಪೆಗಳನ್ನು ತಿನ್ನಲು ಪ್ರಾರಂಭಿಸಿದೆ. ನೆಲಗಡಲೆ ಸಿಪ್ಪೆ ಮುಂತಾದುವನ್ನು ತಿನ್ನಲು ಆರಂಭಿಸಿ ಸಾಧ್ಯವಿಲ್ಲವೆಂದು ಬಿಡಬೇಕಾಯಿತು. ನನ್ನ ಯೋಗ್ಯತೆಗೆ ತಕ್ಕ ಸಿಪ್ಪೆಗಳನ್ನು ತಿನ್ನಬೇಕೆಂದು ಸೇಬಿನ ಹಣ್ಣಿನ ಸಿಪ್ಪೆ, ಮಾವಿನ ಹಣ್ಣಿನ ಸಿಪ್ಪೆ ಮುಂತಾದುವನ್ನು ಕೆಲ ದಿನಗಳ ವರೆಗೆ ತಿಂದೂ ಆಯಿತು.

ಈ ವಿಟಾಮಿನ್ ಥಿಯೊರಿಯಲ್ಲಿ ಇನ್ನೊಂದು ಮುಖ್ಯವಾದ ಅಂಶವೆಂದರೆ ಯಾವ ಪದಾರ್ಥವನ್ನೇ ಆಗಲಿ ಬೇಯಿಸಬಾರದಂತೆ. ನಮ್ಮ ಬೀದಿಯಲ್ಲಿನ ಆಚೆ ತುದಿಯಲ್ಲಿರುವ ವೆಂಕಟರಮಣ ಶೆಟ್ಟಿಯ ಅಂಗಡಿಯಿಂದ ಬೇಳೆ ತಂದಿದ್ದೆ. ಎರಡು ಮಣ ಕಟ್ಟಿಗೆಯನ್ನು ಹಾಕಿ ನಾಲ್ಕು ಘಂಟೆಯವರೆಗೆ ಆ ಬೇಳೆಯನ್ನು ಬೇಯಿಸಿದರೂ ಅದು ಕರಗಲಿಲ್ಲ. ಶೆಟ್ಟಿಯ ಮೇಲೆ ಬಹಳ ಸಿಟ್ಟು ಬಂದಿತು. ಆದರೆ ಹಿಂದಿನ ದಿವಸ ರೀಡಿಂಗ್ ರೂಮಿನಲ್ಲಿದ್ದ ಒಂದು ಪೇಪರಿನಲ್ಲಿ, ಯಾವ ಪದಾರ್ಥವನ್ನೇ ಆಗಲಿ ಹೆಚ್ಚಾಗಿ ಬೇಯಿಸಬಾರದೆಂಬ ತತ್ವವನ್ನು ಓದಿದ್ದು ನೆನಪಿಗೆ ಬರಲು ಅದಕ್ಕನುಗುಣವಾಗಿ ಶೆಟ್ಟಿ ಬೇಳೆ ಕೊಟ್ಟಿರಬಹುದೆಂದು ಸುಮ್ಮನಾದೆ. ಅಲ್ಲದೆ ಶೆಟ್ಟಿಯ ಹತ್ತಿರ ನನ್ನ ಬೇಳೆ ಬೇಯುವುದಿಲ್ಲವೆಂದೂ ನನಗೆ ಗೊತ್ತು!

x x x x

ಅಕ್ಕಿಯಲ್ಲಿನ ತೌಡು, ಹೊಟ್ಟುಗಳನ್ನು ತೆಗೆದರೆ ಅದರಲ್ಲಿ ಸಾರವು ಹೋಗುವುದೆಂದೂ ಅದಕ್ಕೇ ಮಿಶ್ರಿತವಾದ ಅಕ್ಕಿಯ ಅನ್ನವನ್ನೇ ನಾವು ತಿನ್ನಬೇಕೆಂದು ವೈದ್ಯಕೀಯ ಮಾಸಿಕ(?)ಗಳು ಹೊಡೆದುಕೊಳ್ಳುತ್ತಿವೆ. ನಮಗೆ ಬರುತ್ತಿರುವ ರೇಷನ್ ಅಕ್ಕಿಯು ಸಹ ಈ ತತ್ವವನ್ನೇ ಅವಲಂಬಿಸಿದೆ. ಮೊದಲಿಗೆ ನಾವು ಮನೆಗೆ ಅಕ್ಕಿಯನ್ನು ಆಳಿಸಿದಾಗ ಭತ್ತ, ತೌಡು, ಹೊಟ್ಟು ಮುಂತಾದುವನ್ನು ಬೇರ್ಪಡಿಸುತ್ತಿದ್ದೆವು. ಆದರೆ ಈಗ ಅಕ್ಕಿ ಮನೆಗೆ ಬಂದಾಗ ಅದರಲ್ಲಿದ್ದ ಒಂದೆಗಡು ಅಕ್ಕಿಯನ್ನು ಆಚೆ ಹಾಕಿ ಭತ್ತ, ತೌಡು ಮತ್ತು ಹೊಟ್ಟಿನ ಅನ್ನ ಮಾಡುತ್ತೇವೆ.

ಈ ವಿಟಾಮಿನ್ ಥಿಯರಿ ಸಿಪ್ಪೆಯೊಂದಕ್ಕೆ ಮುಗಿಯಲಿಲ್ಲ. ವಿಟಾಮಿನ್‌ಗಳು 'ಎ' ಯಿಂದ 'ಜಡ್' ವರೆಗೆ ಇವೆ. ಒಂದು ಆಹಾರದಲ್ಲಿ ಒಂದು ವಿಟಾಮಿನ್ ಇದ್ದರೆ ಇನ್ನೊಂದು ಆಹಾರದಲ್ಲಿ ಇನ್ನೊಂದು 'ವಿಟಾಮಿನ್' ಇರುತ್ತದೆ. ನಾವು ಬೆಳಿಗ್ಗೆ ಎದ್ದು ಆ ದಿವಸದ ಅಡಿಗೆ ಕಾರ್ಯಕ್ರಮವನ್ನು ಮುಂದಿಟ್ಟುಕೊಂಡು ಯಾವ ಯಾವ ವಿಟಾಮಿನ್‌ಗಳು ಇವೆ ಎಂಬುದನ್ನು ನೋಡಿಕೊಂಡು ಸಾಲದೆ ಹೋದ ವಿಟಾಮಿನ್‌ಗಳನ್ನು ಅವುಗಳು ಪುಷ್ಕಳವಾಗಿರುವ ಪದಾರ್ಥಗಳಿಂದ ಭರ್ತಿ ಮಾಡಬೇಕು.

ಈ ವಿಟಾಮಿನ್ ಬಗ್ಗೆ ಯಾಕೆ ಇಷ್ಟು ಹೇಳಬೇಕಾಯಿತೆಂದರೆ ಹುಲ್ಲಿನಲ್ಲಿ ಸಹ ಮನುಷ್ಯನ ದೇಹಪುಷ್ಟಿಗೆಬೇಕಾಗುವಂಥ ವಿಟಾಮಿನ್‌ಗಳಿವೆಯಂತೆ. ಮೊದಲಿಗೆ ನಾವೇನೋ ಹೇಳುತ್ತಿದ್ದೆವು; "ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ?" ಎಂದು. ಈಗ ಆ ಗಾದೆಯ ಮಾತನ್ನು ಹೇಳುವ ಹಾಗೆಯೇ ಇಲ್ಲ. ಮೊನ್ನೆ ಬಸವನ ಗುಡಿಯಿಂದ ಜಟಕಾದಲ್ಲಿ ಮಾರ್ಕೆಟ್ಟಿಗೆ ಹೋಗುವಾಗ ಜಟಕಾ ಸಾಬಿಯು ಒಂದು ಆಣೆ ಜಾಸ್ತಿ ಕೇಳಿದ್ದಕ್ಕೆ "ಹುಲ್ಲಿಗೆ ಏನಯ್ಯಾ ಬರ" ಎಂದೆ. ಸಾಬಿ ಒಂದು ಸಲ ನನ್ನನ್ನು ಕಡೆಗಣ್ಣಿನಿಂದ ನೋಡಿ "ನಿಮಗೇನು ಗೊತ್ತು ಸಾಮೀ" ಎಂದು ಪ್ರಾರಂಭಿಸಿ, ಯುದ್ಧ, ಸರಕಾರ, ಊರಿನಲ್ಲಿರುವ ಅಂಗಡಿಕಾರರು. ಗಣ್ಯ ಮನುಷ್ಯರು ಮುಂತಾದವರನ್ನೂ, ಅವರ ಹತ್ತಿರದ ಅನುಬಂಧಿಗಳನ್ನೂ, ಉರ್ದು, ಕನ್ನಡ ಮತ್ತು ತಮಿಳು ಮಿಶ್ರಿತವಾದ ತನ್ನದೇ ಆದ ಒಂದು ಸ್ವಂತ ಭಾಷೆಯಲ್ಲಿ ನನಗೆ ಬೇಸರವಾಗುವವರೆಗೂ, ತನಗೆ ಆಯಾಸವಾಗುವವರೆಗೂ ಬಯ್ದು. ಹುಲ್ಲಿಗೆ ಸಹ ಈಗ ಪೇಚಾಟ ಬಂದಿದೆ ಎಂಬುದು ನನಗೆ ಆಗ ತಿಳಿಯಿತು.

x x x x

ನಮ್ಮಲ್ಲಿಯ ವೈದ್ಯರುಗಳೂ, ಡಾಕ್ಟರುಗಳೂ ಹುಲ್ಲಿನಲ್ಲಿರುವ ಸಾರವನ್ನು ತೆಗೆದು "ಹುಲ್ಲೋ", "ಗ್ರ್ಯಾಸೋ", "ತೃಣಾವೃತ", "ಹುಲ್ಲೋ ಮಾಲ್ಟ್", "ತೃಣ ಚೂರ್ಣ", "ಹುಲ್ಲೋ ಬಿಸ್ಕಟ್ಸ್" ಮುಂತಾದ ಪೌಷ್ಟಿಕಗಳನ್ನು ತಯಾರಿಸಬಹುದು. ಎಲ್ಲ ಅಂಗಡಿಗಳಲ್ಲಿಯೂ, ಹೋಟೇಲುಗಳಲ್ಲಿಯೂ ಹುಲ್ಲಿನಿಂದ ತಯಾರಿಸಿದ ತಿಂಡಿಗಳನ್ನು

ನಾವು ತಿನ್ನಬಹುದು. "ಎಳೆಯ ಗರಿಕೆ ಹುಲ್ಲಿನ ಹಲ್ವ ನಮ್ಮಲ್ಲಿ ದೊರೆಯುತ್ತದೆ" ಎಂಬುದಾಗಿ ಹೋಟೇಲು ಮಾಲೀಕರು ದಪ್ಪ ಅಕ್ಷರದಲ್ಲಿ ಬರೆದ ಬೋರ್ಡುಗಳನ್ನು ಹಾಕಬಹುದು. "ಹೂ ಮಾರುವ ಅಂಗಡಿಯಲ್ಲಿ ಹುಲ್ಲು ಮಾರುವುದುಂಟೇ?" ಎಂಬ ನಾಣ್ಣುಡಿಯು ಕಾಣೆಯಾಗುವುದು ಏಕೆಂದರೆ ಪ್ರತಿಯೊಂದು ಹೂ ಮಾರುವ ಅಂಗಡಿಯಲ್ಲೂ ಹುಲ್ಲು ಮಾರಲ್ಪಡುವುದು.

x ) x x

ಹುಲ್ಲು ನಮ್ಮ ಆಹಾರದಲ್ಲಿ ಗಣನೀಯವಾದ ಸ್ಥಾನವನ್ನು ಗಳಿಸಿಕೊಂಡರೆ ಆಗುವ ಪ್ರತಿಕ್ರಿಯೆಗಳೇನೆಂಬುದನ್ನು ನೋಡೋಣ. ಮೊಟ್ಟ ಮೊದಲನೆಯದಾಗಿ ದನಕರುಗಳಿಗೂ, ನಮಗೂ ತುರಸಿನ ಮೇಲಾಟವೇ ಬೀಳುವುದು ಮಕ್ಕಳು ಬೀದಿಯ ಹೊರಗಡೆ ಆಡುವುದನ್ನು ಬಿಟ್ಟು ದನದ ಕೊಟ್ಟಿಗೆಯಲ್ಲಿ ಆಡುತ್ತೇವೆಂಬ ನೆಪದಿಂದ ಹಸುವಿಗೆ ಹಾಕಿದ್ದ ಹುಲ್ಲನ್ನೆಲ್ಲಾ ತಿಂದುಬಿಡುತ್ತವೆ. ವಾಕಿಂಗ್ ನೆಪದಿಂದ ಗುಡ್ಡಗಾಡು ಪ್ರದೇಶಕ್ಕೆ ಹೋಗಿ ಹುಡುಗರು ಹೊಟ್ಟೆ ತುಂಬಾ ಹುಲ್ಲು ಮೇದು ಬಂದು ಯಾವ ಕೆಲಸವನ್ನೂ ಮಾಡದೆ ಮೆಲಕು ಹಾಕುತ್ತ ಕುಳಿತು ಬಿಡುತ್ತಾರೆ!

x x x x

ದನಕರುಗಳು ಹುಲ್ಲು ತಿನ್ನುವುದರಿಂದಲೇ ಅವು ಮನುಷ್ಯನಿಗಿಂತಲೂ ಶಕ್ತಿಯಲ್ಲಿ ಎಷ್ಟೋ ಪಾಲು ಹೆಚ್ಚಿನದಾಗಿವೆ. ಅದೇ ಆಹಾರವನ್ನು ಮನುಷ್ಯನು ತಿಂದರೆ ಅಷ್ಟೇ ಶಕ್ತಿಯುತನಾಗಬಹುದೆಂದು ತರ್ಕಿಸುವುದು ಸೂಕ್ತವಾದದ್ದೇ.

ವೈಜ್ಞಾನಿಕ ಯುಗದಲ್ಲಿನ ಪವಾಡಗಳು ಅದ್ಭುತವಾದುವೆಂಬುದಕ್ಕೆ ಮನುಷ್ಯನು ಪಶುವಾಗಿ ಪರಿವರ್ತನೆಯಾಗುವುದೇ ಸಾಕ್ಷಿಯಾಗಿದೆ!

# ಹೋಟೇಲ್‍ಗಳು

ಹೋಟೇಲ್‍ನ ಊಟ ತಿಂಡಿಗಳು ಆರೋಗ್ಯಕಾರಿಯೆಂದು ವಾದಿಸುವವರಲ್ಲಿ ನಾನೂ ಒಬ್ಬ. ಉದಾಹರಣೆಗೆ ಹೋಟೇಲ್‍ನ ಹಾಲನ್ನು (ಅದೇ ಉದಾಹರಣೆಗೆ) ತೆಗೆದುಕೊಳ್ಳೋಣ. ಆ ಹಾಲನ್ನು ತಾರಕ ಹಂತಕ್ಕೇರಿದ ಕ್ಷಯರೋಗಿ ಕುಡಿದರೂ ಬಾಧಕವಾಗುವುದಿಲ್ಲ. ಎರಡನೆಯದಾಗಿ ಊಟ ತಿಂಡಿಗಳು ರುಚಿಯಾಗಿದ್ದರೆ ತಾನೇ ಹೆಚ್ಚು ತಿನ್ನಬೇಕೆಂಬ ಆಸೆ ಹುಟ್ಟುತ್ತೆ. ಹೋಟೇಲ್‍ನ ಊಟದ ವೈಶಿಷ್ಟ್ಯವೇ ಅದು. ಅಡಿಗೆ ಪದಾರ್ಥಗಳು ಯಂತ್ರದಿಂದ ತಯಾರಿಸಿದಂತೆ ಕೊಂಚವೂ ಬದಲಾವಣೆ ಹೊಂದದೆ ಇರುತ್ತವೆ. ಇದನ್ನು ತಿಂದು ಬೇಸರಹೊಂದಿರುವವರು ಹೆಚ್ಚಿಗೆ ತಿನ್ನುವುದೇ ಇಲ್ಲ. ಅವರಿಗೆ ಅಜೀರ್ಣವೆಂಬುದೇ ಗೊತ್ತಿಲ್ಲ ಅವರ ಆರೋಗ್ಯ ಕೆಡುವುದೇ ಇಲ್ಲ.

x x x x

ಆತ್ಮಸಂಯಮಕ್ಕೆ ಹೆದ್ದಾರಿಯೆಂದರೆ ಹೋಟೇಲ್ ಎಂದು ಎದೆ ತಟ್ಟಿ ಹೇಳಬಲ್ಲೆ. ಸಾಮಾನ್ಯವಾಗಿ ಹೋಟೇಲ್‍ನಲ್ಲಿ ಊಟ ಮಾಡುವವರೆಂದರೆ ವಿದ್ಯಾರ್ಥಿಗಳು ಮತ್ತು ಅಧಿಕಾರಿ ವರ್ಗದವರು ವಿದ್ಯಾರ್ಥಿಗಳು ತಮ್ಮ ವ್ಯಾಸಂಗವನ್ನು ಮುಂದುವರಿಸುವುದಕ್ಕಾಗಿ ಹೋಟೇಲ್‍ಗಳಲ್ಲಿ ಆಶ್ರಯ ಪಡೆದಿರುತ್ತಾರೆ. ಮನಸ್ಸಿನ ವಿಕಾರಗಳಿಗೆ ನಾವು ತೆಗೆದುಕೊಳ್ಳುವ ಆಹಾರವೇ ಮೂಲವೆಂದು ಮನೋವಿಜ್ಞಾನಿಗಳ ಮತ. ಹೋಟೇಲ್‍ನ ನೀರಸ ಆಹಾರವನ್ನು ವರ್ಷಾರಂಭದಿಂದ ವರ್ಷಾಂತ್ಯದವರೆಗೆ ಸೇವಿಸುತ್ತ ಹೋದಲ್ಲಿ ಯಾವ ಮನೋವಿಕಾರಕ್ಕೂ ಅವಕಾಶವೇ ಇಲ್ಲ. "ಏನೋ ಹುಳಿ ಖಾರ ತಿಂದ ದೇಹ....ಚಪಲ...." ಮುಂತಾದುವು ಹೋಟೇಲ್‍ನಲ್ಲಿ ಊಟ ಮಾಡುವವರಿಗೆ ಅನ್ವಯಿಸುವುದಿಲ್ಲ. ಅಲ್ಲಿನ

ಅಡಿಗೆಗಳಲ್ಲಿ ಅವು ಇವೆಯೋ, ಇಲ್ಲವೋ ಎಂಬುದನ್ನು ಕೆಮಿಕಲ್ ಎಗ್ಸಾಮಿನರ್‌ಗಳು ಸಹ ಕಂಡುಹಿಡಿಯಲು ಸಾಧ್ಯವಾಗಿಲ್ಲವಂತೆ!

ನೌಕರರು ತಮ್ಮ ಹೆಂಡಂದಿರನ್ನು ಹೇರಿಗೆಗೋ ಅಥವಾ ಇನ್ನಾವ ಕಾರಣದಿಂದಲೋ ತೌರೂರಿಗೆ ಕಳಿಸಿರುತ್ತಾರೆ. ಇಂತಹವರು ಹೋಟೇಲ್‌ನಲ್ಲಿ ಊಟಮಾಡುತ್ತಿದ್ದರೆ ಬೇರೆ ಹೆಂಗಸರ ಕಡೆ ಗಮನ ಕೊಡುವುದು ಹಾಗಿರಲಿ, ಕಾಲಕ್ರಮೇಣ ತಮ್ಮ ಹೆಂಡಂದಿರ ನೆನಪು ಮಾಡಿಕೊಳ್ಳುವುದನ್ನು ಸಹ ಬಿಟ್ಟುಬಿಡುತ್ತಾರೆ. ಆತ್ಮಸಂಯಮಕ್ಕೆ ಹೋಟೇಲ್ ಪ್ರಥಮ ಸೋಪಾನವೆಂದು ಪರ್ಯಾಯವಾಗಿ ಹೇಳಿದಂತಾಯಿತು.

x x x x

ಹೋಟೇಲ್‌ನ ಅತಿ ಸಂಭ್ರಮದ ಸಮಯವೆಂದರೆ ಊಟದ ಸಮಯದಲ್ಲಿ ತುಪ್ಪ ಬಡಿಸುವುದು. ಆ ತುಪ್ಪವನ್ನು ತಂದಾಗ ಮಾಣಿಯ ಮುಖದ ಮೇಲೆ ಎಳೆನಗೆಯೊಂದು ನಲಿದಾಡುತ್ತಿರುತ್ತೆ. ಅದೊಂದು ರಸ ನಿಮಿಷ. ನೀವು ಕಣ್ಣುಮುಚ್ಚಿ ಕಣ್ಣು ತೆರೆಯುವುದರಲ್ಲಿ "ಟಣ್" ಎಂತ ತುಪ್ಪ ಹಾಕಿ ಮುಂದೆ ದಾಟಿರುತ್ತಾನೆ, ಆ ಚುರುಕು ಬುದ್ಧಿಯ ಘಟ್ಟದ ಕೆಳಗಿನ ಮಾಣಿ! ತುಪ್ಪದ ಚಂಚವು ಚಾಕುವಿನ ಅಲುಗಿನಂತೆ ಎರಡು ಕಡೆಯಲ್ಲೂ ಮೊನೆಯಾಗಿದ್ದು, ಇಂದ್ರಜಾಲ ಮಹೇಂದ್ರಜಾಲ ವಿದ್ಯೆ ಎಂಬುದೊಂದು ಇದ್ದಲ್ಲಿ ತುಪ್ಪ ಬಡಿಸುವಾಗ ನೀವು ಅದನ್ನು ನೋಡಬಹುದು. ತುಪ್ಪ ಅಂತರಿಕ್ಷದಲ್ಲಿ ಕೋಲ್ಮಿಂಚಿನಂತೆ ಒಂದು ಸಾರಿ ಝಳಪಿಸಿದ್ದನ್ನು ನೀವು ಕಂಡಿರುವಿರಿ. ಆದರೆ ಅನ್ನದ ಮೇಲೆ ಅದು ಬಿದ್ದೇ ಇರುವುದಿಲ್ಲ!

ಮಹಾಶಯರೊಬ್ಬರು 'ತುಪ್ಪ' ಎನ್ನುವ ಶಬ್ದಕ್ಕೆ ಈ ರೀತಿ ವ್ಯಾಖ್ಯಾನ ಮಾಡಿದ್ದಾರೆ. "Ghee is not a substance, but a sound produced by two metallic vessels" ಇದರ ಸತ್ಯಾರ್ಥದ ಬಗ್ಗೆ ಹೆಚ್ಚಿನ ವಿವರಣೆ ಅನವಶ್ಯಕ. ಇಲ್ಲಿಗೆ ಸಾಕುಮಾಡುತ್ತೇನೆ.

x x x x

ಹೋಟೇಲ್‌ಗಳಲ್ಲಿ ಊಟ ಮಾಡುತ್ತ ಹೋದಲ್ಲಿ ಹೊಟ್ಟೆಬಾಕತನ ಕಡಿಮೆಯಾಗುತ್ತೆ. ವೃಕೋದರನು ಸಹ ಮಿತಾಹಾರಿಯಾಗುತ್ತಾನೆ.

ಇಂದಿನ ರೇಷನಿಂಗ್ ದಿನಗಳಲ್ಲಿ ಇದು ಎಷ್ಟು ಅನುಕೂಲವಾದದ್ದೆಂದು ಎಲ್ಲರ ಅನುಭವಕ್ಕೆ ಬಂದಿದೆ. ಹೋಟೇಲ್‌ನ ಸಾರು ಹುಳಿಗಳು ಸಾಮಾನ್ಯವಾಗಿ ಆಯುರ್ವೇದೀಯ ಕಷಾಯವನ್ನು ಹೋಲುತ್ತವೆ. ಅವನ್ನು ಹೆಚ್ಚಿಗೆ ಸೇವಿಸುವುದು ಮನುಷ್ಯನಿಗೆ ಮೀರಿದ ಸಾಹಸ ಎಂದು ಹೇಳಬಹುದು. ಈ ಬಗ್ಗೆ ನನ್ನ ಅನುಭವಕ್ಕೆ ಬಂದ ಒಂದು ಪುಟ್ಟ ಪ್ರಸಂಗವನ್ನು ಉಲ್ಲೇಖಿಸುತ್ತೇನೆ. ನಾನೊಂದು ಹೋಟೆಲ್‌ನಲ್ಲಿ ಊಟ ಮಾಡುತ್ತಿದ್ದೆ. ಅಡಿಗೆ ಬಹಳ ಚೆನ್ನಾಗಿರುತ್ತಿತ್ತು. ಒಂದು ದಿನ ಸ್ನಾನ ಮಾಡುತ್ತಿದ್ದೆ. ಅಡಿಗೆ ಮನೆಗೂ ಬಚ್ಚಲ ಮನೆಗೂ ಒಂದೇ ಗೋಡೆ ಹೋಟೇಲ್ ಮಾಲೀಕರು ಬಂದವರೇ ಅಡಿಗೆಯವನನ್ನು ಮನಸ್ವಿಯಾಗಿ ಬಯ್ದು ಆ ದಿನವೇ ಅವನನ್ನು ಕೆಲಸದಿಂದ ತೆಗೆದು ಹಾಕಲಾಗಿದೆಯೆಂದು ಅಪ್ಪಣೆ ಚೀಟಿ ಕೊಟ್ಟರು. ಅಡಿಗೆಯವನು ಅಂಗಲಾಚಿ ಬೇಡಿಕೊಂಡನು "ಸ್ವಾಮಿ, ಬೋರ್ಡರ್‌ಗಳನ್ನು ಕೇಳಿ. ನಾನೇನಾದರೂ ಅಡಿಗೆ ಕೆಡಿಸುತ್ತೇನೊ, ಹೇಗೆ ಎಂದು" ಅದಕ್ಕೆ ಮಾಲೀಕರು "ಅವರಿಂದ ಕಂಪ್ಲೇಂಟ್ ಇಲ್ಲದಿರುವದರಿಂದಲೇ ನಿನ್ನನ್ನು ಕೆಲಸದಿಂದ ತೆಗೆದು ಹಾಕಿರುವುದು. ಬೀಗರ ಮೇಜುವಾನಿಯಂತೆ ನೀನು ಅಡಿಗೆ ಮಾಡಿದರೆ ನನ್ನ ಗತಿಯೇನು?" ಎಂತ ಕೇಳಿದರು. ನೋಡಿ ಇಲ್ಲಿದೆ ಹೋಟೇಲ್ ಅಡಿಗೆಯ ಗುಟ್ಟು!

x x x x

ಮಾರ್ಕೆಟ್‌ನಲ್ಲಿ ದೊರೆಯುವ ಅತೀ ಅಗ್ಗದ ತರಕಾರಿಗಳೇ ಹೋಟೇಲ್‌ನ ಅಡಿಗೆಗಳಲ್ಲಿ ರಂಜಿಸುವುವು. ತೊಂಡೆಕಾಯಿ, ಬೀಜಕ್ಕೆ ಬಿಟ್ಟಿರುವ ಬೆಂಡೇಕಾಯಿ ('ಲೇಡೀಸ್ ಫಿಂಗರ್ಸ್' ಹೋಗಿ 'ಗ್ರಾಂಡ್ ಮಾಸ್ ಫಿಂಗರ್ಸ್' ಆಗಿರುತ್ತವೆ) ನುಗ್ಗೆಕಾಯಿ, ಹರಿವೆ ದಂಟು, ವಯಸ್ಸಾದ ಸೌತೆಕಾಯಿ, ಅರ್ಧಂಬರ್ಧ ಕೊಳೆತ ಬೂದುಗುಂಬಳಕಾಯಿ ಇವೇ ಸಾಮಾನ್ಯವಾಗಿರುತ್ತವೆ ನುಗ್ಗೇಕಾಯಿಗೆ ಸಂಬಂಧಿಸಿದ ಒಂದು ಪುಟ್ಟ ಪ್ರಸಂಗವನ್ನು ಹೇಳಿಬಿಡುತ್ತೇನೆ ಕೇಳಿ. ಒಂದು ಸಾರಿ ನಾನು ಊಟ ಮಾಡುವ ಹೋಟೇಲ್‌ನಲ್ಲಿ ನುಗ್ಗೇಕಾಯಿ ಹುಳಿ ಮಾಡಿದ್ದರು. ಅವು ಅತಿಯಾಗಿ ಬಲಿತಿದ್ದರಿಂದ ಹಲ್ಲಿಗೆ ನುರಿಯುವಂತಿರಲಿಲ್ಲವಾಗಿ ಎಲ್ಲರೂ ಅದನ್ನು ಚೆಲ್ಲಿದ್ದರು. ಹಾಸ್ಯ ಪ್ರಕೃತಿಯವನಾದ ನಾನು ಕುಚೋದ್ಯ ಮಾಡ

ಬೇಕೆಂದು ನೇರವಾಗಿ ಮ್ಯಾನೇಜರರವರ ಬಳಿ ಹೋಗಿ "ಏನು ಸ್ವಾಮಿ, ನಿಮ್ಮ ಅಡಿಗೆಯವನು ಎಷ್ಟೊಂದು ಸೌದೆ ಹಾಳು ಮಾಡುತ್ತಿದ್ದಾನೆ. ಅವನಿಗೆ ಬುದ್ಧಿ ಹೇಳಬಾರದೆ" ಎಂದೆ. ಮ್ಯಾನೇಜರರವರು ಒಳಕ್ಕೆ ಧಾವಿಸಿದರು. ಅವರಿಗೆ ಸೌದೆ ನಷ್ಟವಾದ ಪರಿ ಅರ್ಥವಾಗಲಿಲ್ಲ. ನಾನೀರೀತಿ ವಿವರಿಸಿದೆ "ನೋಡಿ, ಎಲೆಯಮೇಲೆ ಎಷ್ಟೊಂದು ನುಗ್ಗೇಕಾಯಿ ಚೆಲ್ಲಿದ್ದಾರೆ ಅದನ್ನೆಲ್ಲಾ ಒಣಗಿಸಿ ಒಲೆಗೆ ಹಾಕಿದ್ದರೆ ಎರಡು ಹಂಡೆ ನೀರು ಕಾಯುತ್ತಿತ್ತು." ಮ್ಯಾನೇಜರರವರು ಪೂರ್ವಭಾವಿಯಾಗಿ ಏರ್ಪಾಟು ಮಾಡಿದಂತೆ ಹಿಂದೋಟ ಕಿತ್ತಿದರು.

ಇನ್ನು ಆತಿಥ್ಯದ ಬಗ್ಗೆ ನೋಡೋಣ. ಅಲ್ಲಿ ಎಲ್ಲರಿಗೂ ಯಾವಾಗಲೂ ಒಂದೇ ಸಮನಾದ ಮರ್ಯಾದೆ, ಅಷ್ಟೇ ಸ್ವಾತಂತ್ರ್ಯ. ಮನೆಗೆ ನಾವು ಬರುವುದು, ಹೋಗುವುದು ಕ್ರಮ ತಪ್ಪಿದಲ್ಲಿ 'ಇದೇನು ಮನೆಯೋ ಹೋಟೇಲೋ' ಎಂದು ಕೇಳುವುದು ಸರ್ವ ಸಾಮಾನ್ಯವಾಗಿದೆ.

ಅಳಿಯ ಮಾವನ ಮನೆಗೆ ಮೊದಲನೆಯ ಸಾರಿ ಬಂದಾಗ, ಸರಾಫಿ ಅಂಗಡಿಯನ್ನೇ ಹರವಿರುತ್ತಾರೆ. ನಿಂತಲ್ಲಿ ಮಣೆ, ಕೂತಲ್ಲಿ ಮಣೆ, ತಲೆಯಲ್ಲಿರುವುದು ತುಟಿಗೆ ಬರುವುದಕ್ಕೆ ಮುಂಚೆಯೇ ಅದು ಸಿದ್ಧವಾಗಿರುತ್ತೆ. ಅದೇ ಅಳಿಯ ಮೇಲಿಂದ ಮೇಲೆ ಬರುವುದಕ್ಕೆ ಆರಂಭವಾದಲ್ಲಿ, ಅವನು ಹಳಬನಾಗುತ್ತ ಬಂದಲ್ಲಿ, ಬೆಳ್ಳಿಯ ಲೋಟ, ಕಂಚು, ಹಿತ್ತಾಳೆ ಲೋಟಗಳಾಗಿ ಮಾರ್ಪಟ್ಟು, ಕೊನೆಗೆ ಅವನೇ ಒಂದು ಕುಡಿಯುವ ಲೊಟಾವನ್ನು ಹುಡುಕಿಕೊಳ್ಳಬೇಕಾಗುತ್ತೆ ಆದರೆ ಹೋಟೇಲ್‌ನಲ್ಲಿ ಈ ಕ್ರಾಂತಿಯುತವಾದ ಬದಲಾವಣೆಗಳೇ ಇಲ್ಲ. ಇದಕ್ಕೇ ರಷ್ಯನರು "Communal Socialism" ಎಂಬ ದೊಡ್ಡ ಹೆಸರು ಕೊಟ್ಟಿದ್ದಾರೆ.

ಹೋಟೇಲ್‌ಗಳು ದೇವರ ಸರ್ವಾಂತರ್ಯಾಮಿತ್ವಕ್ಕೆ ಸರಿಹೋಲುತ್ತವೆಯೆಂದರೆ ಅತ್ಯುಕ್ತಿಯ ದೋಷ ತಟ್ಟಲಾರದು. ಎಂತಹ ಚಿಕ್ಕ ಹಳ್ಳಿಯಾದರೂ ಸರಿಯೆ, ನಗರದ ಸಂದಿ ಮೂಲೆಗಳಲ್ಲಾದರೂ ಸರಿಯೆ, ಹೋಟೇಲ್‌ಗಳು ಇದ್ದೇ ಇರುತ್ತವೆ.

ಸಮಾಜ ಸುಧಾರಣಾ ಕೆಲಸವನ್ನು ಹೋಟೇಲ್‌ಗಳು ಮಾಡಿದಷ್ಟು ಸಮರ್ಪಕವಾಗಿ ಮತ್ತು ತೃಪ್ತಿಕರವಾಗಿ ಇನ್ನಾವ ಸಂಸ್ಥೆಯೂ ಮಾಡಿಲ್ಲ

ಸನಾತನಿಗಳು ಸಹ ಈ ದಿವ್ಯ ಸಂಮೋಹನಕ್ಕೆ ಬಲಿ ಬಿದ್ದು 'ಸನಾತನ ಧರ್ಮವನ್ನು ಕಾಪಾಡಬೇಕೆಂದು' ಹೋಟೆಲ್‌ನಲ್ಲಿ ಕಾಫಿ ಹೀರುತ್ತ ಕುಳಿತಿರುತ್ತಾರೆ ಮುಟ್ಟಿದರೆ ಮೈಲಿಗೆಯಾದೀತೆಂದು ಮೂರು ಹರಿದಾರಿ ದೂರ ಸರಿಯುವವರು ಹೋಟೇಲ್‌ನಲ್ಲಿ. ವರ್ಣಸಂಕರ ಭೇದವನ್ನು ಲಕ್ಷಿಸುವುದಿಲ್ಲ.

ಇನ್ನೂ ಒಂದು ವಿಷಯ, ಊರಿನ ಪ್ರಗತಿಯ ಪ್ರಮಾಣ, ಆ ಊರಿನಲ್ಲಿರುವ ಹೋಟೇಲ್‌ಗಳ ಸಂಖ್ಯೆಯ ಮೇಲೆ ಅವಲಂಬಿಸಿದೆ ಎಂಬುದು ನಿರ್ವಿವಾದವಾದುದು. ಮುಖ್ಯವಾಗಿ, ಯಾವುದೇ ಒಂದು ಮಹತ್ತರವಾದ ವಿಷಯವನ್ನು ಚರ್ಚಿಸುವುದಕ್ಕಾಗಲಿ, ಜಟಿಲ ಸಮಸ್ಯೆ-ಯೊಂದನ್ನು ಬಿಡಿಸುವುದಕ್ಕಾಗಲೀ, ಹೋಟೇಲ್‌ನಂತಹ 'ಪ್ಲಾಟ್‌ಫಾರಂ' ಬೇರೊಂದಿಲ್ಲ. ನಂಜಪ್ಪನ ಹೆಂಡತಿ ಸುಬ್ಬರಾಯರ ಮಗನೊಂದಿಗೆ ಓಡಿ ಹೋದ ಸಂಗತಿಯಿಂದ ಹಿಡಿದು ಇಂದಿನ ಯುದ್ಧ, ರೇಷನಿಂಗ್ ಮುಂತಾದ ಎಲ್ಲ ವಿಷಯಗಳೂ ನುರಿಯುವುದು ಹೋಟೇಲ್‌ನಲ್ಲಿಯೇ ಎಂಬುದು ನಮ್ಮ ಅನುಭವಕ್ಕೆ ಬಂದಿದೆ. ಅಂದರೆ ಒಟ್ಟಿನಲ್ಲಿ ಒಂದು ಅತ್ಯುತ್ತಮ ಹಾಗೂ ಸುವ್ಯವಸ್ಥಿತ 'ಕ್ಲಬ್' ಎಂಬಹಾಗಾಯಿತು. ನಾವು ಯಾರನ್ನಾದರೂ ನೋಡಬೇಕೆಂದಿದ್ದರೆ ಅವರು ತಮ್ಮ ಅಚ್ಚುಮೆಚ್ಚಿನ ಹೋಟೇಲ್‌ಗೆ ಹೋಗುವ ಸಮಯಕ್ಕೆ ಸರಿಯಾಗಿ ಘಟಾಯಿಸಿದರೆ ಸಾಕು, ನಾವು ಅವರನ್ನು ಅಲ್ಲಿ ಹಿಡಿಯಬಹುದು

ಪಾಶ್ಚಾತ್ಯ ದೇಶಗಳಲ್ಲಂತೂ ಹೋಟೇಲ್‌ಗಳು ನಮ್ಮ ದೇಶಗಳಿಗಿಂತ ಹೆಚ್ಚಿನ ಸ್ಥಾನವನ್ನು ಅಲಂಕರಿಸಿವೆ. ರಾಜಕಾರ್ಯಧುರೀಣರು ಸೇರುವುದಲ್ಲಿ; ರಾಷ್ಟ್ರಗಳ ಹಣೆಬರಹಗಳು ಬದಲಾಗುವುದಲ್ಲಿ; ಸಂಧಿ ಕರಾರು ಪತ್ರಗಳಿಗೆ ಸಹಿಯಾಗುವುದಲ್ಲಿ. ಜಪಾನಿನಲ್ಲಿ ಭಾರಿ ವ್ಯಾಪಾರಗಳು ಕುದುರಬೇಕಾದರೆ ಹೋಟೇಲ್‌ಗಳಿಗೆ ಹೋಗಬೇಕಂತೆ. ಒಂದು ಕಪ್ ಚಹದೊಂದಿಗೆ ಲಕ್ಷಾಂತರ ರೂಪಾಯಿಗಳ ವ್ಯಾಪಾರವನ್ನು ಕೇವಲ ಹತ್ತಿಪ್ಪತ್ತು ನಿಮಿಷಗಳಲ್ಲಿ ಮುಗಿಯಿಸಿ ಬಿಡಬಹುದಂತೆ!

---

# ನಾನು ನೋಡಿದ ಒಂದು ತಮಿಳು ಚಿತ್ರ

ನಾನು ತಮಿಳು ಚಿತ್ರಗಳನ್ನು ನೋಡುವುದೇ ಬಹು ಅಪರೂಪ. ಕಾರಣ, ಆ ಭಾಷೆ ನನಗೆ ಬಾರದು ಒಂದು ಸಾರಿ "ರಮುಜಾ಼ ಹಬ್ಬದ ಪ್ರಯುಕ್ತ ಐದು ಅಮೋಘ ಪ್ರದರ್ಶನಗಳು" ಎಂಬ ಕಾಮನ ಬಿಲ್ಲನ್ನು ನಾಚಿಸುವ ಭಿತ್ತಿಪತ್ರಿಕೆಯನ್ನು ನೋಡಿ "ಒಂದು ಭಕ್ತಿರಸ ಪ್ರಾಧಾನ್ಯವಾದ ಪೌರಾಣಿಕ ಚಿತ್ರ"ವನ್ನು ನೋಡಿಯೇ ಬಿಡಬೇಕೆಂಬ ಬಯಕೆ ಹೆಚ್ಚಾಯಿತು. ಐದು ಪ್ರದರ್ಶನಗಳ ಪೈಕಿ ಒಂದಕ್ಕೆ ಹೋದದ್ದೂ ಆಯಿತು ಮೊದಲು ನಾರಾಯಣ ನಾಮಸ್ಮರಣೆ ಮಾಡುತ್ತ ನಾರದ ಬಂದ. ಚಾಕಚಕ್ಯದಿಂದ ಕಣ್ಣುಕೈಗಳನ್ನು ತಿರುಗಿಸಿ ತ್ರಿಲೋಕಗಳನ್ನು ಒಂದೇ ಸಮನಾಗಿ ಸುತ್ತಬೇಕಾದ ನಾರದನು ಬಹು ಸ್ಥೂಲಕಾಯದವನಾಗಿದ್ದುದನ್ನು ನೋಡಿ ನನಗೆ ಬಹಳ ಆಶ್ಚರ್ಯವಾಯಿತು. ಆ ಗುಡಾಣದ ಹೊಟ್ಟೆ ಹೊತ್ತುಕೊಂಡು (ಹೆಗಲಮೇಲೆ ದೊಡ್ಡತಂಬೂರಿ ಮತ್ತು ಇತರ ಪರಿಕರಗಳು) ಅವನು ಯಾವ ವಾಹನವೂ ಇಲ್ಲದೆ ಹೇಗೆ ಸಂಚಾರಮಾಡುವನೋ ಎಂದು ಆಶ್ಚರ್ಯಪಡುವ ಹೊತ್ತಿಗೆ ನಾರದ ಸಂಗೀತಕ್ಕೆ ಆರಂಭಿಸಿದ. ರಾಗ, ತಾಳ, ಲಯಬದ್ಧವಾಗಿ ಸ್ವರಗಳನ್ನು ಹಾಕುತ್ತ 'ಸ ರಿ ಗ ಮ'ಗಳನ್ನು ಪ್ರಾರಂಭಿಸಿದ. ಇದು ಮುಗಿಯುವ ಹೊತ್ತಿಗೆ ಎರಡು ರೀಲ್‌ಗಳು ಮುಗಿದಿರಬಹುದು.

ನಂತರ ಕಥಾನಾಯಿಕೆಯು ಪ್ರತ್ಯಕ್ಷಳಾದಳು. ಆಕೆ ಬಂದಕೂಡಲೇ ಯಾವ ಮಾತನ್ನೂ ಆಡದೆ, ಆಕೆ ಇಂತಹಳೇ ಇರಬೇಕೆಂದು ನಾವು ಗ್ರಹಿಸುವುದಕ್ಕೆ ಅವಕಾಶಕೊಡದೆ ವಸಂತಋತುವಿನ ವರ್ಣನೆ, ವಿರಹವ್ಯಥೆಯಿಂದಾಗುವ ಅನರ್ಥ ಮುಂತಾದುವುಗಳ ಬಗ್ಗೆ ತನ್ನ ಹೃದಯವನ್ನು ತೋಡಿಕೊಳ್ಳಲಾರಂಭಿಸಿದಳು. ಆ ನಟಿಗೆ ಋಷಿಪಂಚಮಿ ವ್ರತವನ್ನು

ಹಿಡಿಯಲು ಒಂದೆರಡು ವರ್ಷಗಳು ಮಾತ್ರ ಸಾಲದಿರಬಹುದು. ಆಕೆ ಹದಿನಾರರ ಹೊಸಲನ್ನು ದಾಟಿದ ಹುಡುಗಿಯಂತೆ ಚಲ್ಲಾಟವಾಡುವುದನ್ನು ನೋಡಿ ನನ್ನ ಮನಸ್ಸು ಬಹುವಾಗಿ ನೊಂದಿತು. ಆಕೆಯ ಮೊಮ್ಮಗಳೊ ಅಥವಾ ಮಗಳೊ ಈ ರೀತಿಯಾಗಿ ಮಾಡಿದ್ದರೆ ಏನೋ ಸುಮ್ಮನಿರಬಹುದಾಗಿತ್ತು. ಆದರೆ ಈ ಕೊಂಗ ('ವಂಗ' ಅನ್ನುವ ಹಾಗೆ) ಮುದಿ ನಟಿಯು ಹೀಗೇಕೆ ಕಾಡುತ್ತಾಳೆ, ಈ ಬಗ್ಗೆ ನಾವೇನು ಮಾಡಬೇಕು ಎಂತ ಆಶ್ಚರ್ಯಪಡುತ್ತ ಒಂದು ಸಿಗರೇಟ್ ಹಚ್ಚಿದೆ. ಅಷ್ಟು ಹೊತ್ತಿಗೆ ಕಥಾನಾಯಕನು (ಪರಮೇಶ್ವರನು) ಶ್ರೀಮಂತ ಮಾವನು ತೀರಿಕೊಂಡನೆಂದು ಒಬ್ಬಳೇ ಮಗಳ ಗಂಡನು ಹಾಜರಾಗುವಂತೆ ಬಂದಿಳಿದ. ಪರಮೇಶ್ವರನು ಬಂದ ಕೂಡಲೇ ಟ್ರಾನ್ಸ್‌ಫರ್ ಸೀನರಿಯಾಗಿ ಕೈಲಾಸ, ಪರ್ವತ, ನಂದಿ, ವಿನಾಯಕ, ರಬ್ಬರ್ ಹಾವು ಮುಂತಾದ ಅನೇಕಾನೇಕ ಪದಾರ್ಥಗಳು ಕಾಣಿಸತೊಡಗಿದುವು. ಈಶ್ವರ ಹಾಡಲು ಪ್ರಾರಂಭಿಸಿದ. ಇವನ ಹಾಡು ಆರಂಭವಾಗುತ್ತಲೇ ತೆಳುವಾದ ಬಟ್ಟೆಯಿಂದ ತಯಾರಿಸಿದ್ದ ಕೈಲಾಸವು ಗಾಳಿಯಲ್ಲಿ ಅರಳಿ ಎಲೆ ನಡುಗುವಂಗೆ ನಡುಗಲಾರಂಭಿಸಿತು! ಒಂದು ಸೋಜಿಗವನ್ನು ನಾನು ಇಲ್ಲಿ ವರ್ಣಿಸಲೇಬೇಕು. ಅದೇನೆಂದರೆ ಕಥಾನಾಯಕಿಗಿಂತ ಕಥಾನಾಯಕನ ವಯಸ್ಸು ೮-೧೦ ವರ್ಷ ಕಡಿಮೆಯಿರಬಹುದು. ನಟನಟಿಯರು ಅಭಿನಯವೊಂದರ ವಿನಾ ಎಲ್ಲವನ್ನೂ ಮಾಡುತ್ತಿದ್ದರು. ಮರದ ಬೊಂಬೆಗಳಂತೆ ನಿಂತು ಐದು ನಿಮಿಷಕ್ಕೊಂದಾವರ್ತಿ ಹಾಡುವುದೊಂದೇ ಅವರ ಕೆಲಸ. ತಾಂಡವ ನೃತ್ಯದಲ್ಲಿ ಈಶ್ವರನು ಪಾರ್ವತಿಯನ್ನು ಹೊತ್ತುಕೊಂಡು ಕುಣಿಯಬೇಕಂತೆ ಆದರೆ ಕ್ರೇನ್ ತಂದು ಎತ್ತಬಹುದಾದಂಥ ಬೃಹದಾಕಾರದ ಹೆಣ್ಣನ್ನು ಬರಗಾಲದ ಹೆಣದಂತಿದ್ದ ಪರಮೇಶ್ವರ ಹೇಗೆ ಹೊತ್ತುಕೊಂಡು ಕುಣಿಯಬೇಕು! ಅಂತೂ ಕುಣಿದ.

ಉದ್ಯಾನವನದ ದೃಶ್ಯ. ಅಲ್ಲಲ್ಲಿ ಕ್ರೋಟನ್ ಗಿಡಗಳು, ಕ್ಯಾಸ್ಟ್ ಐರನ್ ಕಾರಂಜಿಗಳು, ಅತ್ಯಾಧುನಿಕ ಕಾಲೇಜ್ ಹುಡುಗಿಯರು ಧರಿಸುವ ಉಡಿಗೆ ತೊಡಿಗೆಗಳನ್ನು ತೊಟ್ಟು (ಹೇರ್‌ಪಿನ್, ಕ್ಲಿಪ್ ಮುಂತಾದುವುಗಳೊಂದಿಗೆ) ನಟಿಯೋರ್ವಳು ಬಂದಳು. ಈಕೆ ಗಂಗೆಯಂತೆ! ಆಕೆಯೂ

ಹಾಡಿದಳು. ಅವಳ ವಕ್ರದಂತ ಪಂಗ್ತಿಯನ್ನು ನೋಡಿ, ಇದುವರೆಗೂ ಅವಳು ಹಲ್ಲಿನ ಡಾಕ್ಟರ ಬಳಿಗೆ ಹೋಗದೆಯಿರುವ ಆಕೆಯ ಅಜಾಗರೂಕತೆಗಾಗಿ ಅವಳನ್ನು ಮನಸ್ಸಿನಲ್ಲಿಯೇ ಬಯ್ದೆ.

ಒಂದು ವಿಷಯುವನ್ನು ಇಲ್ಲಿ ಹೇಳುವುದು ಮರೆತೆ. ಈ ತಪ್ಪಿಗಾಗಿ ಸಹೃದಯ ವಾಚಕರ ಕ್ಷಮೆ ಬೇಡುತ್ತೇನೆ. ಯಜ್ಞ ಕುಂಡದಲ್ಲಿ ಪಾರ್ವತಿ ಬೀಳುತ್ತಾಳೆ! ಅದಕ್ಕೆ ಕುಪಿತನಾಗಿ ಈಶ್ವರನು ಹುಚ್ಚಾಟಕ್ಕೆ ಪ್ರಾರಂಭಿಸುತ್ತಾನೆ. ನಾನೇ ಈಶ್ವರನಾಗಿದ್ದರೆ ದಕ್ಷನಿಗೆ ಎರಡು ಪ್ಲೇಟ್ ಕೇಸರಿಭಾತ್ ಕೊಡಿಸುತ್ತಿದ್ದೆ. ಏಕೆಂದರೆ ಅಂತಹ ಬೃಹದಾಕಾರದ ಪಾರ್ವತಿಯು ಅಗ್ನಿಪ್ರವೇಶ ಮಾಡುವಂತೆ ಮಾಡಿದ ಮಹದುಪಕಾರಕ್ಕೆ. ಪಾರ್ವತಿಯು ಚೆಲುವೆಯೆಂದೂ, ಲಕ್ಷಣವಂತೆಯೆಂದೂ ಗ್ರಂಥಗಳಲ್ಲಿಯೂ ಪುರಾಣಗಳಲ್ಲಿಯೂ ಓದಿದ್ದೇನೆ. ಆದರೆ ಈ ಚಿತ್ರದಲ್ಲಿ ನಾನು ಕಂಡ ಪಾರ್ವತಿಯು ನನ್ನ ಮನೋರಾಜ್ಯದಲ್ಲಿ ನಿರ್ಮಿಸಿದ ಚಿತ್ರಕ್ಕಿಂತ........ಏನೂ ಬರೆಯಲಾರೆ!

ಒಬ್ಬ ಹುಡುಗಿಯು ತಪ್ಪು ತಪ್ಪು ಹೆಜ್ಜೆಗಳನ್ನು ಹಾಕತೊಡಗಿದಳು ಆರ್ಕೆಸ್ಟ್ರಾ ಒಂದೇ ಸಮನೆ ಅರಚಲು ಶುರುಮಾಡಿತು. ಅದು ಭರತನಾಟ್ಯವಂತೆ. ಆಕೆಗೇ ಬೆಸರವಾಗಿ ಅವಳು ಬಹು ಜಾಗ್ರತೆಯಾಗಿ ನಿಷ್ಕ್ರಮಿಸಿದಳು.

ಮೇಲೆ ವಿವರಿಸಿದ ಸ್ವಾರಸ್ಯ ವಿಷಯುಗಳಿಗಿಂತ ಇನ್ನೊಂದು ಅತಿ ಸ್ವಾರಸ್ಯ ವಿಷಯುವನ್ನು ಹೇಳುತ್ತೇನೆ. ಆದಿಶೇಷನಿಗೆ ಇರುವಂತೆ ನನಗೂ ಸಹಸ್ರ ನಾಲಿಗೆಗಳಿದ್ದರೆ ಇನ್ನೂ ಚೆನ್ನಾಗಿ ವಿವರಿಸುತ್ತಿದ್ದೆನೋ ಏನೋ! ಇರಲಿ. ಇದೇ ಚಿತ್ರದಲ್ಲಿನ ಹಾಸ್ಯ. ನಿಜವಾಗಿಯೂ ಅದು ಬಹಳ ಹಾಸ್ಯಾಸ್ಪದವಾಗಿತ್ತು. ಈ ಹಾಸ್ಯವನ್ನು ನೋಡಿದ ಮೇಲಂತೂ ನನಗೆ ಪೂರಾ ದುಃಖವಾಯಿತು. ನಿಜ. ಹಾಸ್ಯ ಸನ್ನಿವೇಶಗಳಲ್ಲಿ ದುಃಖವನ್ನುಂಟುಮಾಡುವುದು ಹೆಚ್ಚಿನ ಸಾಹಸವೆಂದು ಹೇಳದಿರಲಾರೆ.

ಈ ಹಾಸ್ಯದಲ್ಲಿ ಬರೀ ಅಶ್ಲೀಲವೇ ತುಂಬಿತ್ತು, ದ್ವಂದ್ವಾರ್ಥದ ಪ್ರಯೋಗಗಳು, ನಟನಟಿಯರ ಮೇರೆದಪ್ಪಿದ ಅಭಿನಯ, ಎಲ್ಲವೂ ಮನ

ಷ್ಯನಲ್ಲಿರುವ ತುಚ್ಛಭಾವನೆಯನ್ನು ಉದ್ರೇಕಗೊಳಿಸುವಂತಿದ್ದುವು. ಒಂದು ಪ್ರಶ್ನೆ. ಹಾಸ್ಯಕ್ಕೆ ಅಶ್ಲೀಲ ಸಾಧನವೆ?

ನಾನು ನೋಡಿದ ಚಿತ್ರದಲ್ಲಿ ಅಸಂಭವನೀಯ ಸಂಭವಗಳು, ಉತ್ಪ್ರೇಕ್ಷೆ ಮುಂತಾದುವು ಹೇರಳವಾಗಿ ತುಂಬಿದ್ದುವು. ರಾತ್ರಿ ಮನೆಗೆ ಬಂದಾಗ ನಮ್ಮ ಪಡೋಸಿ ಮನೆಯ ಗಡಿಯಾರ 'ಡಣ್' ಎಂದಿತು. "ಎಂಟಾಣೆ ಜುಲ್ಮಾನೆ, ನಾಲ್ಕು ಗಂಟೆ ಕಠಿಣ ಶಿಕ್ಷೆ" ಎಂದು ಗೊಣಗುತ್ತಾ ಮಲಗಿದೆ.

---

# ನಾನು ಶ್ರೀಮಂತನಾದರೆ....?

ಅಹುದು ನಾನು ಶ್ರೀಮಂತನಾದರೆ ಏನು ಮಾಡಬೇಕು? ಪೆಟ್ಟಿಗೆಯಲ್ಲಿಯೂ ಹಿಮ್ಮಣಿಯಲ್ಲಿಯೂ, ಬ್ಯಾಂಕಿನಲ್ಲಿಯೂ, ತುಂಬಿರುವ ಹಣವನ್ನು ಹೇಗೆ ವೆಚ್ಚಮಾಡಬೇಕು? ಎಂತಹ ಜಟಿಲ ಪ್ರಶ್ನೆಯಿದು! ಆದರೆ ವಾಚಕರು ಕೇಳಬಹುದು, ನಾನು ಶ್ರೀಮಂತನಾಗುವುದು ಹೇಗೆಂದು? ಆದರೆ ನಾನು ಬಿಡಿಸುತ್ತಿರುವ ಸಮಸ್ಯೆಯದಲ್ಲ. ಹೇಗಾದರೂ ಆಗಬಹುದು ಆದಮೇಲೆ ಅದನ್ನು ಹೇಗೆ ವೆಚ್ಚಮಾಡಬೇಕೆಂಬುದೇ ಈಗ ನನ್ನ ತಲೆಯನ್ನು ಕೆಡಿಸಿದೆ. ಆದಾಗ್ಯೂ ಈ ಸಮಸ್ಯೆಯನ್ನು ಬಗೆಹರಿಸಲು ಕೆಲವು ಟಿಪ್ಪಣಿಗಳನ್ನು ಚೆನ್ನಾಗಿ ಐಸ್ ಕ್ರೀಂ ತಿಂದು ತಲೆ ತಂಪಾಗಿದ್ದಾಗ ಬರೆದಿಟ್ಟಿದ್ದೇನೆ.

ಮೊಟ್ಟಮೊದಲನೆಯ ಕೆಲಸವೆಂದರೆ ಗತಿಸಿದ ನನ್ನ ತಂದೆ ತಾಯಿಗಳ ಫೋಟೊ ಹುಡುಕಿ ಮುಸಕಾಗಿದ್ದ ಅವುಗಳನ್ನು ಎನ್‌ಲಾರ್ಜ್ ಮಾಡಿಸಿ ಗೋಡೆಗೆ ನೇತು ಹಾಕುತ್ತೇನೆ. ಅನೇಕ ಶ್ರೀಮಂತರು ಹೀಗೆ ಮಾಡಿರುವುದನ್ನು ನಾನು ನೋಡಿದ್ದೇನೆ, ಆದ್ದರಿಂದ.

ಮನೆಯಿದ್ದ ಮೇಲಲ್ಲವೆ ಗೋಡೆಯಿರಬೇಕು ಇದೊಂದು ಬೀಜ ವೃಕ್ಷ ಅನ್ಯಾಯ. ಒಂದು ಮನೆ ಕಟ್ಟಿಸುತ್ತೇನೆ. ನನಗೂ ನನ್ನ ಕುಟುಂಬಕ್ಕೂ ಸಾಕಾಗಿ ಇನ್ನೂ ಐದಾರು ಸಂಸಾರಗಳಿರುವಂತಹ ಒಂದೇ ಒಂದು ದೊಡ್ಡ ಮನೆಯನ್ನು ಕಟ್ಟಿಸುತ್ತೇನೆ. ಅಂದರೆ, ಆಗ ನಾನು ದೊಡ್ಡ ಮನೆತನದವನಾಗಲು ಅಭ್ಯಂತರವಿಲ್ಲ. ಮನೆಯಾದಮೇಲೆ, ಮನೆಗೆ ಒಂದು ಹೆಸರು ಬೇಕಷ್ಟೆ? ಅನೇಕರು ಮನೆಗಳಿಗೆ ವಿಚಿತ್ರ ಹೆಸರುಗಳನ್ನು ಕೊಟ್ಟಿರುತ್ತಾರೆ. ಕೆಲವಂತೂ ನನಗೆ ಇಂದಿಗೂ ಅರ್ಥವಾಗಿಲ್ಲ 'ಜ್ಞಾನವಿಲ್ಲ' 'ಸುಂದರವಿಲ್ಲ' 'ಷುವಿಲ್ಲ' ಇತ್ಯಾದಿ "ಸುಖವಿಲ್ಲಾ" ಎಂದರೆ

ಮನೆಯಂತೆ! ಆದರೆ, ಇಂತಹ ನಾಮಾಂಕಿತವಾದ ಮನೆಗಳಲ್ಲಿ ವಾಸ ಮಾಡುವವರ ವಿಷಯದಲ್ಲಿ ಜನಗಳ ಮನೋಭಾವನೆಯು ಹೇಗಿರುವ ದೆಂದು ವಾಚಕರೇ ಊಹಿಸಲಿ.

ಇನ್ನೂ ಕೆಲವರು ಬುದ್ಧಿವಂತರಿದ್ದಾರೆ. ಅವರು ಸುಮ್ಮನೆ ತಮ್ಮ ಹೆಂಡಂದಿರ ಹೆಸರನ್ನಿಟ್ಟು ಮುಂದೆ 'ವಿಲಾಸ'ವೆಂಬ ಮೂರಕ್ಷರವನ್ನು ಸೇರಿಸುತ್ತಾರೆ. ರುಕ್ಮಿಣಿವಿಲಾಸ, ಸೀತಾವಿಲಾಸ, ಇಂದಿರಾವಿಲಾಸ. ಕೆಲವರು ತಮ್ಮ ಕುಲದೈವಗಳ ಹೆಸರನ್ನಿಡುತ್ತಾರೆ. ಕೃಷ್ಣವಿಲಾಸ, ಮುಂತಾಗಿ. ಮನೆಯು ನಾಲ್ಕು ಜನರಿಗೆ ಆಧಾರವಾಗಿ ಹಿಂದುಗಡೆ ಅರ್ಧ ಬಿದ್ದು, ವಿಪರೀತ ಸೋರುತ್ತಿದ್ದರೂ ಅದಕ್ಕೆ 'ಇಂದ್ರಭವನ' ವೆಂದು ಕರೆಯುತ್ತಾರೆ. ಅಲ್ಲದೆ ಆಜನ್ಮ ಬ್ರಹ್ಮಚಾರಿಯಾದ ಮಾರುತಿಯು ವಿಲಾಸಾದಿಗಳಿಗೆ ತಿಲಾಂಜಲಿಯನ್ನಿತ್ತಿದ್ದರೂ ಅವನಿಗೂ ಬಿಡದೆ, ಬೆನ್ನು ಹತ್ತಿ "ಮಾರುತಿ ವಿಲಾಸ" ವೆಂದು ಕೂಡ ನಾಮಕರಣ ಮಾಡುತ್ತಾರೆ.

ಕೆಲವರು 'ಹಿಲ್ ವಿಯೂ,' 'ಲೇಕ್ ವಿಯೂ' 'ಪಾರ್ಕ್ ವಿಯೂ' ಎಂತ ಬರೆದುಕೊಂಡಿರುತ್ತಾರೆ. ಆದರೆ ನಾನು ಕಟ್ಟಿಸಬೇಕೆಂದಿರುವ ಮನೆಯ ಎದುರಿಗೆ ಒಂದು ದೊಡ್ಡ ಮೋರಿ ಇರುವುದರಿಂದ "ಗಟಾರ್ ವಿಯೂ" ಎಂತ ಹೆಸರಿಡಬೇಕಾಗುತ್ತದೆ. ಇದು ಅಷ್ಟು ಚನ್ನಾಗಿರುವು ದಿಲ್ಲವೆಂದು ಈ "ವಿಯೂ" ಗಲಾಟೆಯನ್ನೇ ಬಿಟ್ಟಿದ್ದೇನೆ

ಇದಕ್ಕಿಂತ ಇದು ನನ್ನ ಮನೆಯೇ ಎಂದು, ಸರ್ವರಿಗೂ ವೇದ್ಯ ವಾಗಲೆಂದು "ನಾಡಿಗೇರ ಕೃಷ್ಣರಾಯ ವಿಲಾಸ" ಎಂದು ಹೆಸರಿಡುತ್ತೇನೆ.

ಇಷ್ಟಾದರೆ ಇಲ್ಲಿಗೆ ಮುಗಿಯಿತೆಂದು ತಿಳಿಯಬೇಡಿರಿ ಶ್ರೀಮಂತ ನಾದನೆಂದರೆ ಬಂಧು ವರ್ಗದವರು, ಹಸಿದ ಬೆಕ್ಕುಗಳು ಪುಷ್ಟವಾದ ಇಲಿ ಯನ್ನು ಅರಸಿಕೊಂಡು ಬರುವಂತೆ ಮನೆಗೆ ಬಂದು ತುಂಬುವರು ಅವರಿ ಗಾಗಿ ಗೇಟ್‌ನ ಮೇಲೆ "ನಾಯಿಗಳಿವೆ, ಎಚ್ಚರಿಕೆ" ಎಂತ ಬೋರ್ಡ್ ಹಾಕುತ್ತೇನೆ ಅಂದರೆ ನಾಯಿಗಳೇ ಇವೆಯಂತಲ್ಲ ಶ್ವಾನರೂಪಿಯಾದ ಬಂಧುಗಳಿದ್ದಾರೆಂದು ಜನಗಳು ಅರ್ಥಮಾಡಿಕೊಳ್ಳಲೆಂದು!

ಇನ್ನು ಮನೆಯೆನ್ನು ತಕ್ಕಂತೆ ಸಿಂಗರಿಸುವದು. Book of Knowledge, Encyclopiaediea of Brittanica ಮುಂತಾದ

ಬೆಲೆಯುಳ್ಳ ಪುಸ್ತಕಗಳನ್ನು ಕರಿಮರದ ಬೀರುಗಳಲ್ಲಿ (ಗಾಜಿನ ಬಾಕಿಲು ಗಳಿರುವ) ಹಾಕಿ ನನ್ನ ಮನೆಗೆ ಬಂದವರೆಲ್ಲರೂ ನೋಡುವಂತೆ ಪ್ರದರ್ಶನ ಕ್ಕಿಡುತ್ತೇನೆ. ಆ ಪುಸ್ತಕಗಳನ್ನು ನಾನು ಓದಬೇಕೆಂತಲೂ ಅಲ್ಲ, ಓದಿದರೆ ಅವು ನನಗೆ ಅರ್ಥವಾಗುತ್ತವೆಯೆಂದೂ ಅಲ್ಲ. ಅವುಗಳು ಮನೆಯಲ್ಲಿದ್ದರೆ ಎಷ್ಟೋ ಭೂಷಣ!

ಮಹಾತ್ಮ ಗಾಂಧಿಯವರು ಪರದೇಶಿ ವಸ್ತುಗಳನ್ನು ಸುಡಬೇಕೆಂದು ಹೇಳಿದಾಗ ನಾನು ಸಿಗರೇಟ್ ಸುಡುವುದಕ್ಕಾರಂಭಿಸಿದೆ ಮನೆಯಲ್ಲಿ ಯಾವ ಪದಾರ್ಥವಾದರೂ ಸಿಕ್ಕುತ್ತದೆ. ಬೆಂಕಿ ಪೆಟ್ಟಿಗೆ ಮಾತ್ರ ಬೇಕಾ ದಾಗ ಏನು ಮಾಡಿದರೂ ಸಿಕ್ಕುವುದಿಲ್ಲ. ಇದು ಸಿಗರೇಟ್ ಸೇದುವವರಿಗೆ ಅನುಭವವಿದೆ. ಕಷ್ಟಪಟ್ಟು ತಪಸ್ಸನ್ನಾಚರಿಸಿ ಮೋಕ್ಷ ಪಡೆಯಬಹುದು; ಬ್ರಿಟಿಷರ ಮನಸ್ಸನ್ನೊಲಿಸಿ ಸ್ವರಾಜ್ಯ ಪಡೆಯಬಹುದು; ಆದರೆ ಸಿಗರೇಟು ಸೇದುವ ಚಟ ಹತ್ತಿದಾಗ ಮನೆಯಲ್ಲಿಯೇ ಇರುವ ಬೆಂಕಿ ಪೆಟ್ಟಿಗೆ ಹುಡು ಕುವುದು ಕಷ್ಟ. ಆದ್ದರಿಂದ ಸಂದುಗೊಂದುಗಳಲ್ಲಿಯೂ ಮೂಲೆ ಮೂಲೆ ಗಳಲ್ಲಿಯೂ, ಒಟ್ಟಿನ ಮೇಲೆ ಎಲ್ಲಿ ಕೈಹಾಕಿದರೆ ಅಲ್ಲೊಂದು ಬೆಂಕಿಪೆಟ್ಟಿಗೆ ಸಿಗುವಂತೆ ಏರ್ಪಾಡು ಮಾಡುತ್ತೇನೆ. ಇದೆಂತಹ ಹುಚ್ಚು, ಇದೇನು ಮಹಾ, ಎಂದು ನೀವು ಮೋರೆ ಸೊಟ್ಟಮಾಡಬಹುದು. ಆದರೆ ಇದು ಸ್ವಾನುಭವದ ವಿಷಯ, ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ.

ಈವರೆಗೆ ಹೇಳಿದ ವಿಷಯಗಳು ಅನುಕೂಲತೆಗಳಿಗೆ ಸಂಬಂಧಿಸಿದುವೇ ವಿನಾ, ಮನೆಯ ಸಿಂಗಾರಕ್ಕೆ ಏನೂ ಸಂಬಂಧವಿಲ್ಲ. ಈಚೆಗೆ ರವಿವರ್ಮನ ಚಿತ್ರಗಳು ಕಡಿಮೆಯಾಗಿವೆ. ಬರಗಾಲದ ಹೆಣಗಳಂತೆ ಇರುವ ಬಂಗಾಳಿ ಚಿತ್ರಕಲೆಯೇ ಶ್ರೇಷ್ಠವಂತೆ. ನಾನು ಕಲಾವಿದನಲ್ಲ ಇದರಲ್ಲಿರುವ ಕಲೆ (ಕೊಲೆ?) ನನಗರ್ಥವಾಗುವುದಿಲ್ಲ. ಆದಾಗ್ಯೂ ಸಾರ್ವಜನಿಕಾಭಿ ಪ್ರಾಯದ ಪ್ರವಾಹಕ್ಕೆ ಇದಿರು ಹೋಗಲು ಸಾಧ್ಯವೆ? ಆದ್ದರಿಂದ ನೂರಾರು 'ಬಂಗಾಳಿ' ಚಿತ್ರಗಳನ್ನು ಗೋಡೆಯ ಕಾಣದಂತೆ ನೇತು ಹಾಕುತ್ತೇನೆ.

ಮನೆಯಲ್ಲಿ ಇಬ್ಬರೇ ಇದ್ದರೂ ೬–೭ ಜನ ಕುಳಿತುಕೊಳ್ಳುವ ಮೋಟಾರ್ ಕಾರ್ ಇಟ್ಟುಕೊಳ್ಳಬೇಕಂತೆ. ದೊಡ್ಡ ಮೋಟಾರ್ ಕಾರ್

ಇಟ್ಟುಕೊಳ್ಳುವುದು, ದೊಡ್ಡಸ್ತಿಕೆಯ ದೊ(ದ)ಡ್ಡತನ. ಅಂತೆಯೇ ನಾನಾದರೂ ಗ್ಯಾಲನ್‌ಗೆ ೧೦ ಮೈಲು ಓಡುವ ಒಂದು ಕಾರ್ ಕೊಳ್ಳು ತ್ತೇನೆ. ಇಲ್ಲಿಗೇ ಮುಗಿಯಲಿಲ್ಲ ಎಷ್ಟು ಹಣವಿದ್ದರೂ ತಾನೆ ಏನು? ಡ್ರೈವರ್‌ಗೆ ಸಂಬಳ ಕೊಟ್ಟು ಅವನನ್ನು ಮನೆಯಲ್ಲಿ ಕೂರಿಸಿ, ನಾವೇ ಮೋಟಾರ್ ನಡೆಯಿಸಬೇಕಂತೆ. ಆಗಲಿ, ಮೋಟಾರ್ ನಡೆಯಿಸುವುದನ್ನು ಹೇಗಾದರೂ ಮಾಡಿ ಕಲಿತು ಮೋಟಾರ್ ಬಿಡುತ್ತೇನೆ; (ಜನಗಳ ಮೇಲೆ).

ಶ್ರೀಮಂತನಾದೆನೆಂದರೆ ಹೇಳಿಕೊಳ್ಳುವಂತಹ ಅನುಬಂಧಿಗಳು ಬೇಕಾಗುತ್ತೆ. ಒಂದು ಸಾರಿ ನಾನು ರೈಲಿನಲ್ಲಿ ಹೋಗುತ್ತಿದ್ದಾಗ, ಒಬ್ಬ ಮಹನೀಯರು ಸಿಕ್ಕರು. ಹಾಗೆಯೇ ಮಾತನಾಡುತ್ತ, ನೀವಾರೆಂದು ಕೇಳಿದೆ. ಹೇಳಿದರವರು, ತಾವು ಡೆ. ಕ. ಅ ಮ. ಅಂತ. ನನಗರ್ಥವಾಗ ಲಿಲ್ಲ. ಅವರನ್ನೆ ವಿಶದಪಡಿಸಲು ಕೇಳಿಕೊಂಡೆ. ಹೇಳಿದರವರು, "ಡೆಪ್ಯುಟಿ ಕಮಿಷನರ ಅಣ್ಣನ ಮಗನೆಂದು!" ಅಂತು ಅವರು ಕಷ್ಟಪಟ್ಟು ಅಂಟಿಸಿ ಕೊಂಡಿರುವ ಬಾದರಾಯಣ ಸಂಬಂಧವನ್ನು ನೋಡಿ ನಾನು "ಥಂಡಾ" ಆದೆ. ಹಾಗೆಯೇ ನಾನಾದರೂ ಒಬ್ಬ ದೊಡ್ಡ ಅಧಿಕಾರಿಯ ಸಂಬಂಧ ವನ್ನು ಹಚ್ಚಿಕೊಳ್ಳುತ್ತೇನೆ. ಇದುವರಿವಿಗೂ ಎಷ್ಟು ಹುಡುಕಿದರೂ ಹೇಳಿ ಕೊಳ್ಳುವಂತಹ ಹತ್ತಿರದ ಅಥವಾ ಬಹು ದೂರದ ಸಂಬಂಧಿಕರು ಸಿಕ್ಕಿರು ವದಿಲ್ಲ. ಆಗಲಿ, ಇನ್ನೂ ಹುಡುಕುತ್ತೇನೆ.

ಶ್ರೀಮಂತನಾದೆನೆಂದರೆ, ನನ್ನ ಹಸ್ತವೂ ವಾಣಿಯೂ ಅಮೃತತುಲ್ಯ ವಾಗುವದಂತೆ (ಅದು ಹೇಗಾಗುವದೋ ನನಗಿನ್ನೂ ತಿಳಿದಿಲ್ಲ). ಆಗ ಅನೇಕ ಹೊಸ ಕಟ್ಟಡಗಳಿಗೆ ಕಲ್ಲು ಹಾಕುವುದು (ಅಸ್ತಿಭಾರಶಿಲೆ) ಕಟ್ಟಿದ ಹೊಸ ಕಟ್ಟಡಗಳನ್ನು ಅನಾವರಣ ಮಾಡುವುದು (ನಾನು ಅನಾವರಣ ಮಾಡುವದಕ್ಕೆ ಮುಂಚೆ ಕೂಲಿಯವರೂ ಇಂಜನಿಯರುಗಳೂ ಮಾಡಿರು ತ್ತಾರೆ, ಇರಲಿ) ಮುಂತಾದ ಸಾರ್ವಜನಿಕ ಕೆಲಸಗಳನ್ನು ಮಾಡಬೇಕಾಗು ತ್ತದೆ ಆಗ ಭಾಷಣಗಳನ್ನು ಮಾಡಬೇಕು. ಅದಕ್ಕೆ ಬುದ್ಧಿವಂತನಾದ ಒಬ್ಬ ಪದವೀಧರನನ್ನು ಆಪ್ತ ಕಾರ್ಯದರ್ಶಿಯಾಗಿ ಮಾಡಿಕೊಂಡು ಅವನಿಂದ ಭಾಷಣಗಳನ್ನು ಬರೆಯಿಸಿ, ಆ ಸಂದರ್ಭಗಳಲ್ಲಿ ಓದುತ್ತೇನೆ.

ಹೇಗೂ, ಸಾರ್ವಜನಿಕ ಸಂಸ್ಥೆಗಳಾದ ಗ್ರಾಮ ನಿರ್ಮಲೀಕರಣ

ಸಂಸ್ಥೆ (ಅಂದರೆ ಹೇಗಾದರೂ ಮಾಡಿ ಸಂಸ್ಥೆಯಲ್ಲಿರುವ ಹಣವನ್ನು ನಿರ್ಮೂಲೀಕರಣ ಮಾಡುವುದು) ದೇವಸ್ಥಾನದ ಧರ್ಮದರ್ಶಿ ಮುಂತಾದವುಗಳಿಗೆ ನಾಮಕರಣ ಸದಸ್ಯನಾಗುತ್ತೇನೆ. ಅದಕ್ಕೂ ಮುಂದಿನ ಹೆಜ್ಜೆ ಎಂದರೆ, ಪ್ರಜಾಪ್ರತಿನಿಧಿಸಭೆ, ನ್ಯಾಯವಿಧಾಯಕಸಭೆ, ಜಿಲ್ಲಾ ಬೋರ್ಡ್ ಮುಂತಾದ ಸಭೆಗಳಿಗೆ ಉಮೇದುವಾರನಾಗಿ ನಿಲ್ಲುತ್ತೇನೆ. ಹೇಗೂ ನನ್ನಲ್ಲಿ ಹಣವಿದೆ. ಹಣವನ್ನು ನೀರಿಗಿಂತ ತೆಳ್ಳಗೆ ಖರ್ಚುಮಾಡಿದನೆಂದರೆ ಸದಸ್ಯನಾಗಿ ಆರಿಸಿ ಬರುವುದು ಖಂಡಿತ. ಮುಂದೆ ಉಳಿದುದು, ಯಾವುದಾದರೂ ಒಂದು ಪದವಿ ಸಂಪಾದಿಸುವುದು. ಅದಕ್ಕೂ ಹಣದ ಪ್ರವಾಹವನ್ನೇ ಹರಿಸಿ ಬಿಡುತ್ತೇನೆ, ಪದವಿ ದೊರೆಯುತ್ತೆ. ಸಾಕು, ನನ್ನ ಜನ್ಮ ಸಾರ್ಥಕವಾಯಿತು.

ಧನ್ಯ ಧನ್ಯ! ಶ್ರೀಮಂತ?

---

# ರೇಷನ್. ಕತೆ

(ಕಥಾರಚನೆಯಲ್ಲಿ ಇದೊಂದು ಹೊಸಪ್ರಯೋಗ. ಲೇಖಕರ ಸೂಚನೆಯಂತೆ ಕಥೆಗಳನ್ನು ಬರೆದಲ್ಲಿ ಕಾಗದದ ಅಭಾವ ಕಡಿಮೆಯಾಗಬಹುದು !)

"ಶುದ್ಧಪ್ರೇಮ" "ನಿರ್ಮಲಪ್ರೇಮ" ಮತ್ತು "ಆದರ್ಶಪ್ರೇಮ" ಮುಂತಾದ ಬೇರೆ ಬೇರೆ ಶೀರ್ಷಿಕೆಗಳಲ್ಲಿ ಪ್ರಣಯ ಕಥೆಗಳು ಮಾಸ ಮತ್ತು ವಾರಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವುದು ಓದುಗರಿಗೆ ಗೊತ್ತೇ ಇದೆ. ಇಂತಹ ಕತೆಗಳು ಬೇರೆಬೇರೆ ಅಭಿದಾನದಲ್ಲಿ ಇನ್ನೂ ಪ್ರಕಟವಾಗುವ ಸೂಚನೆಗಳು ಇವೆ. ರಾಮಾಯಣ, ಮಹಾಭಾರತ ಕತೆಗಳಿಗಿಂತಲೂ ಇವುಗಳ ಪ್ರಚಾರ ಹೆಚ್ಚಾಗಿರುವುದರಿಂದ ಕತೆಯ ಓಟ ಹೇಗಿರುತ್ತದೆಂಬುದು ಸಾಮಾನ್ಯವಾಗಿ ವಾಚಕರು ಊಹಿಸಿಯೇ ಇರುತ್ತಾರೆ. ಕಾಗದದ ಬರದ ಇಂದಿನ ದಿನಗಳಲ್ಲಿ ಇಂತಹ ಕತೆಗಳನ್ನು ಮತ್ತೆ ಮತ್ತೆ ಪ್ರಕಟಿಸುವುದು ಪಾತಕವೇ ಸರಿ. ಅಂತಹ ಅನಿವಾರ್ಯ ಒದಗಿದಲ್ಲಿ ಈ ಕತೆಗಳನ್ನು ರೇಷನ್ ಪದ್ಧತಿಯಲ್ಲಿ ಬರೆಯಬಹುದು. ಈ ಕೆಳಗೆ ಓದುಗರ ಅವಗಾಹನೆಗೆ ರೇಷನ್ ಕತೆಯನ್ನು ಕೊಟ್ಟಿದ್ದೇನೆ. ಉಳಿದವರೂ ಈ ಪದ್ಧತಿಯನ್ನು ಜಾರಿಯಲ್ಲಿ ತಂದಲ್ಲಿ ಕಾಗದ ಮಸಿಗಳ ಉಳಿತಾಯವಲ್ಲದೆ, ಓದುಗರ ತಲೆನೋವೂ ಕಡಿಮೆಯಾಗುತ್ತದೆ.

**ಕಥೆ:**—ವಸಂತಪುರದಲ್ಲಿ ರಾಧೆ ಮಾಧವರೆಂಬ ಇಬ್ಬರು ಕಾಲೇಜಿನಲ್ಲಿ ಓದುತ್ತಿದ್ದರು. ರಾಧೆಯು ಬಲು ಚಲುವೆ. ಅವಳ ತುಟಿಗಳೋ (ರಾಧೆಯ ವರ್ಣನೆ ಹೇಗಿರುತ್ತದೆಂಬುದು ಎಲ್ಲರಿಗೂ ಗೊತ್ತಿರುವುದರಿಂದ ಅದನ್ನು ಸುಖವಾಗಿ ಬಿಟ್ಟುಬಿಡಬಹುದು)............ಅವಳ ಕಣ್ಣುಗಳು ...............ಅವಳ ವೈಮಾಟ....:.......ಮಂದಹಾಸ............ಇತ್ಯಾದಿ. ಇತ್ಯಾದಿ.

ಮಾಧವ ರೂಪವಂತ. ಅವನ ಕ್ರಾಪು...........ವಿದ್ಯೆ...........ಬುದ್ಧಿ...........ಸುಧಾಮನಂತೆ ದಟ್ಟದರಿದ್ರ.

ರಾಧೆ ಮಾಧವರು ಒಬ್ಬರನ್ನೊಬ್ಬರು ಪ್ರೀತಿಸುತ್ತಿದ್ದರು. ಅವರ ಪ್ರೇಮ...........ನಿಷ್ಕಲ್ಮಷ....ಶುದ್ಧ...........ಆದರ್ಶ..........ನಿರ್ಮಲ............ಇತ್ಯಾದಿ ಇತ್ಯಾದಿಯಾಗಿತ್ತು.

ಈ ಮದುವೆಗೆ ರಾಧೆಯ ತಂದೆ ತಾಯಿಗಳು ಒಪ್ಪಲಿಲ್ಲ. ಏಕೆಂದರೆ ಮಾಧವ ದರಿದ್ರ ಅವರು....ಮದುವೆಗೆ........ಅಡ್ಡಿ ಮಾಡಿದರು

ರಾಧೆ ಮಾಧವರಿಗೆ ದುಃಖವಾಯಿತು. ಬಹಳ ಯೋಚನೆ. ಒಟ್ಟಿಗೆ ...........ಪ್ರಾಣ........ನೀಗಬೇಕೆಂದು...........ದರು.

ಒಂದು ದಿನ ನದಿಯಲ್ಲಿ....ದುಢುಂ....ಶಬ್ದ........ಎರಡು ಹೆಣಗಳು ಎದ್ದವು.

ಹಾ ಸಮಾಜವೇ !........ಧಿಕ್ಕಾರವಿರಲಿ !

---

# ಸ್ವೈಚ್ಛ ಮನೋವೃತ್ತಿ

ಜಗತ್ತು ಆರಂಭವಾದಾಗಿನಿಂದ ಸ್ವೈಚ್ಛ ಮನೋಭಾವವನ್ನು ಮಾನವನಲ್ಲಿ ಕಾಣಬಹುದು. ತನ್ನಲ್ಲಿ ಇಲ್ಲದ ಒಂದು ಕೊರತೆಯನ್ನು ಪರಿಹರಿಸಿಕೊಳ್ಳಲು ಪ್ರಯತ್ನಿಸುವುದು; ಅದು ಸಾಧ್ಯವಾಗದಿದ್ದಲ್ಲಿ ಅದನ್ನು ತೆಗಳುವುದು ಇವು ಅದರ ರೂಪುರೇಖೆಗಳಲ್ಲಿ ಕೆಲವು. ಒಂದು ಕೊರತೆ ತನ್ನಲ್ಲಿ ಇದೆಯೆಂತ ಖಂಡಿತವಾಗಿ ತಿಳಿದಿದ್ದರೂ ಅದು ತನ್ನಲ್ಲಿ ನಿಶ್ಚಯವಾಗಿಯೂ ಇಲ್ಲವೆಂದು ತೋರ್ಪಡಿಸಿಕೊಳ್ಳಲು ಕೆಲವರು ಹೆಣಗುತ್ತಾರೆ. ಸಾಮಾನ್ಯವಾಗಿ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಒಂದು ವಿಶೇಷ ಗುಣವಿದ್ದೇ ಇರುತ್ತೆ. ತನ್ನಲ್ಲಿರುವ ಆ ವಿಶಿಷ್ಟಗುಣವು ಇನ್ನೊಬ್ಬನಲ್ಲಿರುವ ಒಂದು ವಿಶಿಷ್ಟ ಗುಣಕ್ಕಿಂತ ಬಹಳ ಕಡಿಮೆಯಾದದ್ದೆಂದು ಭಾವಿಸುವುದು ತೀರಾ ಸ್ವಾಭಾವಿಕವಾದುದು.

ಒಬ್ಬ ಕಾದಂಬರಿಕಾರನಿದ್ದಾನೆ. ಒಂದು ಆಲಮಾರು ತುಂಬುವಷ್ಟು ಕಾದಂಬರಿಗಳನ್ನು ಬರೆದಿದ್ದಾನೆ. ಸಾಕಷ್ಟು ಖ್ಯಾತಿಯನ್ನು ಗಳಿಸಿದ್ದಾನೆ. ಇನ್ನೊಬ್ಬನು ನಾಟಕಗಳನ್ನು ಬರೆದು ಪ್ರಸಿದ್ಧಿ ಹೊಂದಿದ್ದಾನೆ. ಆ ಕಾದಂಬರಿಕಾರನಲ್ಲಿರುವ ಸ್ವೈಚ್ಛ ಮನೋಭಾವನೆಯು ತಲೆದೋರಿ ಅವನು ನಾಟಕಗಳನ್ನು ಬರೆಯುವಂತೆ ಅವನನ್ನು ಪ್ರೇರೇಪಿಸುತ್ತದೆ. ನಾಟಕ ಬರವಣಿಗೆಯ ಗಂಧಗಾಳಿಯಿಲ್ಲದ ಈ ಮನುಷ್ಯ ಕೃತಿಚೌರ್ಯ ಮಾಡಿಯಾದರೂ ನಾಟಕಗಳನ್ನು ಬರೆಯುತ್ತಾನೆ.

ಇನ್ನು ಕೆಲವರು, ಸಾಹಿತ್ಯ ಪ್ರಪಂಚದಲ್ಲಿ ಹೆಸರು ಹೊಂದಿದವರು ಸಾಹಿತ್ಯದ ನಾನಾ ಅಂಗಗಳಲ್ಲಿಯೂ ತಮಗೆ ಅಭಿರುಚಿಯಿದೆಯೆಂದು ಪ್ರದರ್ಶಿಸಲು ತಮ್ಮ ಶಕ್ತಿ ಸಾಹಸಗಳಿಗೆ ಮೀರಿದ ವಿಷಯಗಳನ್ನು ಆರಿಸಿ

ಕೊಂಡು ಕಗ್ಗಗಳನ್ನು ಗೀಚಿ ಆಭಾಸ ಮಾಡಿಕೊಂಡಿರುವುದನ್ನು ನೋಡಿದ್ದೇವೆ.

ನೈಚ್ಯ ಮನೋಭಾವವು ವಿಹರಿಸದ ಸ್ಥಳವೇ ಇಲ್ಲವೆಂದು ಹೇಳಬಹುದು. ಹೊಟೇಲ್‌ಗೆ ಹೋದರೆ ರವೆಭಾತ್ ಇದೆಯೆಂತ ಹೇಳುತ್ತಾನೆ. ನಿಜವಾಗಿಯೂ ಅದು ರವೆ ಉಪ್ಪಿಟ್ಟು. ಅದನ್ನು ಉಪ್ಪಿಟ್ಟು ಅಂತ ಕರೆಯಲು ಹೊಟೇಲ್‌ನವನಿಗೆ ಆ ಹಾಳು ತುಚ್ಛಮನೋಭಾವ ಅಡ್ಡ ಬರುತ್ತೆ.

ಕೆಲವರು ಕಷ್ಟಪಟ್ಟು ಓದಿ (ಅಥವಾ ಹೇಗಾದರೂ ಮಾಡಿ) ಪದವೀಧರರಾಗಿರುತ್ತಾರೆ. ಪದವೀಧರರಲ್ಲದವರು ಮನುಷ್ಯವರ್ಗಕ್ಕೇ ಸೇರಿದವರಲ್ಲ ಎಂಬ ಭಾವನೆ ಅವರಲ್ಲಿ ಮೂಡಿ, ಎಲ್ಲಿ ತಾವು ಪಧವೀಧರರಲ್ಲವೆಂದು ಜನರು ತಿಳಿದಾರೋ ಎಂದು ಅದನ್ನು ಮೇಲಿಂದ ಮೇಲೆ ಸ್ಪಷ್ಟಪಡಿಸುತ್ತಿರುತ್ತಾರೆ. ರುಜು ಹಾಕುವಾಗಲೂ ಸಹ " ರಾಮಯ್ಯ, ಬಿ.ಎ. " ಎಂತ ಬರೆಯುತ್ತಾರೆ.

ಎತ್ತರವಾಗಿದ್ದವರು ತಾವು ಕುಳ್ಳಾಗಿಲ್ಲವಲ್ಲ ಎಂತ ವ್ಯಥೆಪಡುತ್ತಾರೆ ; ಕುಳ್ಳಾಗಿರುವವರು ತಾವು ಎತ್ತರವಾಗಿಲ್ಲವೆಂತ ದುಃಖಪಡುತ್ತಾರೆ. ಫ್ರಾನ್ಸಿನ ರಾಣಿಯೊಬ್ಬಳು ಬಹಳ ಕುಳ್ಳಾಗಿದ್ದಳು. ತನ್ನ ಕುಳ್ಳತನವನ್ನು ಮುಚ್ಚಿಕೊಳ್ಳಲು ಬಹು ಎತ್ತನೆಯ ಪಾದರಕ್ಷೆ (High-heeled shoes) ಗಳನ್ನು ಹಾಕಿಕೊಳ್ಳಲಾರಂಭಿಸಿದಳು. ಅದನ್ನು ರಾಣೀವಾಸದವರೆಲ್ಲ ಅನುಕರಿಸಿದರು. ಕೊನೆಗೆ ಈ ವ್ಯಾಧಿ ಯೂರೋಪ್, ಅಮೆರಿಕಾ ಮುಂತಾದ ಖಂಡಗಳಿಗೂ ಹಬ್ಬಿತು. ಎಡವುತ್ತಾ, ಮುಗ್ಗರಿಸುತ್ತಾ, ಕುಂಟುತ್ತಾ ನಡೆದರೂ ಚಿಂತೆಯಿಲ್ಲ, ಅವನ್ನು ಹಾಕಿಕೊಳ್ಳಬೇಕು.

ಸಂತಾನ ವಿಹೀನಳಾದ ಒಬ್ಬಾಕೆ ತಾನು ಗರ್ಭವತಿಯೆಂದು ಹೇಳಿ ತಿಂಗಳು ತಿಂಗಳಿಗೂ ಹೊಟ್ಟೆಗೆ ಬಟ್ಟೆಯನ್ನು ಕಟ್ಟಿಕೊಳ್ಳುತ್ತ ಬಂದು ಕೊನೆಗೆ ಏಳನೆಯ ತಿಂಗಳಿನಲ್ಲಿ ಗರ್ಭಪಾತವಾಯಿತೆಂದು ಹೇಳಿದಳು.

ಕಪ್ಪಗಿರುವವರು ತಾವು ಬಿಳಿಯರಾಗಿಲ್ಲವಲ್ಲ ಎಂತ ವ್ಯಸನಪಡುತ್ತಾರೆ. ಬಿಳಿಯರೂ ಹಾಗೆಯೇ ತಾವು ಕಪ್ಪಾಗಿಲ್ಲವಲ್ಲ ಎಂತ ದುಃಖಪಡುತ್ತಾರೆ. ಇದಕ್ಕೆ ಉದಾಹರಣೆಯಾಗಿ ಅನೇಕ ಜನ ಶ್ವೇತವರ್ಣೀಯ ಹೆಂಗಸರು ನೀಗ್ರೋ ಜನರೊಂದಿಗೆ ಸಂಸರ್ಗಮಾಡಿದ ಉಲ್ಲೇಖಗಳುಂಟು.

ಕಪ್ಪಗಿರುವ ಗಂಡಸರು ತಾವು ಅಷ್ಟು ಕಪ್ಪಾಗಿಲ್ಲವೆಂಬುದನ್ನು ತೋರ್ಪಡಿಸಿಕೊಳ್ಳಲು ಅಚ್ಚ ಬಿಳಿಯ ಕೋಟು ಬಿಳಿಯ ಷರ್ಟು ಹೊಲಿಸು ತ್ತಾರೆ. ಬಟ್ಟೆಯ ಬಿಳಿಯ ಛಾಯೆಯ ಹಿನ್ನೆಲೆಯಲ್ಲಿ ಬೆಳ್ಳಗೆ ಕಾಣೋಣ ವೆಂದು ಅವರ ಹಂಬಲ. ನೇವಿ ಬ್ಲೂ, ಕರಿಯ ಸರ್ಜ್ ಮುಂತಾದ ಬಟ್ಟೆ ಗಳನ್ನು ಅವರು ತಾವು ಹಿಡಿದಿರುವ ವಾಕಿಂಗ್ ಸ್ಟಿಕ್ಕಿನಿಂದ ಸಹ ಮುಟ್ಟುವುದಿಲ್ಲ.

ಕಪ್ಪಗಿರುವ ಹೆಂಗಸರು ಇಲಕಲ್ ಸೀರೆಯನ್ನು ಕಂಡರೆ ಹಾವು ಕಂಡವರಂತೆ ಪಲಾಯನಸೂಕ್ತ ಪಠಿಸುತ್ತಾರೆ. ಮುಖಚೂರ್ಣದ (Face Powder) ಬಳಕೆಗೆ ಯಾವಳೋ ಕಪ್ಪಗಿದ್ದ ಹೆಂಗಸೊಬ್ಬಳು ಕಾರಣವಿರ ಬಹುದು. ತುಟಿಯು ತೊಂಡೆಹಣ್ಣಿನಂತೆ ಇದ್ದಿತೆಂಬ ವರ್ಣನೆ ಓದಿದವ ಳೊಬ್ಬಳು ತುಟಿಯ ರಂಗಿಗೆ ಕಾರಣಭೂತಳಾಗಿರಬಹುದು (ಅಥವಾ ಅದನ್ನು ಹಚ್ಚಿಕೊಂಡ ಮೇಲೆ ಭೂತದಂತೆ ಕಂಡಿರಬಹುದು.)

ನಶ್ಯ, ತಂಬಾಕು, ಬೀಡಿ ಮತ್ತು ಸಿಗರೇಟುಗಳ ಅಭ್ಯಾಸವಿಲ್ಲದವರು ಅದನ್ನು ಸೇವಿಸುವವರನ್ನು ನೋಡಿ ತಮಗೆ ಆ ಸುಖವಿಲ್ಲವಲ್ಲಾ ಎಂದು ಪರಿತಾಪಪಟ್ಟುಕೊಂಡು ಅವನ್ನು ಹೊಸದಾಗಿ ರೂಢಿಗೆ ತಂದು ಕೊನೆಗೆ ಅದು ಇವರಲ್ಲಿ ಮನೆಮಾಡಿಕೊಳ್ಳಲು, ತಾವು ಈ ದುರ್ವ್ಯಸನಗಳಿಗೆ ಏಕೆ ಬಿದ್ದೆವೋ ಎಂತ ಗೋಳಿಡುವುದನ್ನು ಸಹ ನೋಡಿದ್ದೇವೆ.

"ನೆರೆಮನೆಯ ತಿಮ್ಮಕ್ಕ ಸರಿಗೆ ಹಾಕಿಕೊಂಡರೆ ಪಕ್ಕದ ಮನೆ ರಾಮಕ್ಕ ಉರುಲು ಹಾಕಿಕೊಂಡಳು" "ಹುಲಿಯ ಬಣ್ಣಕ್ಕೆ ನರಿ ಮೈ ಸುಟ್ಟು ಕೊಂಡಿತು" ಮುಂತಾದ ಗಾದೆಯ ಮಾತುಗಳು ಸ್ವೇಚ್ಛ ಮನೋಭಾವ ದವರನ್ನು ಕುರಿತೇ ಆಗಿವೆ.

ಬಡವರಾದವರು ತಾವು ಬಡವರೆಂದು ಹೇಳಿಕೊಳ್ಳಲು ಬಿಗುಮಾನ. ಪಂಚಮಹಾಪಾತಕಗಳಲ್ಲಿ ಕೆಲವನ್ನು ಮಾಡಿದ್ದೇವೆಂದು ಭಾವಿಸುತ್ತಾರೆ. 'Poverty is neither a sin nor a disgrace' ಅಂತ ಬರ್ನಾರ್ಡ್ ಷಾ ಬಡತನದ ಭಗ್ಗೆ ಹೇಳಿದ್ದರೂ ಅದು ಅವರಿಗೆ ರುಚಿಸದು. ಪರಸ್ಥಳಕ್ಕೆ ಹೋಗಬೇಕಾದಾಗ ಎರವಲು ಬಟ್ಟೆಯನ್ನೂ, ಸಾಮಾನು ಗಳನ್ನೂ ತೆಗೆದುಕೊಂಡು ಹೋಗುತ್ತಾರೆ. ಆದರೆ ಶ್ರೀಮಂತರಿಗೆ ಇನ್ನೊಂದು

ವ್ಯಾಧಿಯಿರುತ್ತೆ. ಕೆಲವರು ತಾವು ಶ್ರೀಮಂತರಲ್ಲವೆಂದು ತೋರ್ಪಡಿಸಲು ಪ್ರಯತ್ನಿಸುತ್ತಾರೆ. ಕೆಲವರು ತಾವು ತೀರಾ ಸರಳಸ್ವಭಾವದವರೆಂದು ತೋರಿಸಿಕೊಳ್ಳಲು ಹರಕಲು ಬಟ್ಟೆ ಹಾಕಿಕೊಳ್ಳುವುದು, ಕೋಟಿನ ಗುಂಡಿಯನ್ನು ತಪ್ಪುತಪ್ಪಾಗಿ ಹಾಕಿಕೊಳ್ಳುವುದು ಮುಂತಾದುವುಗಳನ್ನು ಮಾಡುತ್ತಾರೆ.

ಪತ್ರಿಕೆಗಳಲ್ಲಿ ಪ್ರಕಟವಾಗುವ ಪುಸ್ತಕ ವಿಮರ್ಶೆಗಳನ್ನು (ಅವು ಆಗುವುದೇ ಕಡಿಮೆಯೆನ್ನಿ) ಓದಿ, ತಮ್ಮ ಸ್ನೇಹಿತರೆದುರು ತಾವು ಆ ಪುಸ್ತಕಗಳನ್ನು ಪೂರ್ತಿಯಾಗಿ ಓದಿದ್ದೇವೆಂದು ಕೆಲವರು ಹೇಳಲೂ ಹೇಸುವುದಿಲ್ಲ.

ವೇದ ಪುರಾಣಗಳ ಹೆಸರುಗಳನ್ನು ಕೇಳಿದೊಡನೆಯೇ ಮೋರೆ ಸೊಟ್ಟ ಮಾಡುವವರು, ಯಾವನಾದರೂ ಒಬ್ಬ ಟಾಮ್, ಡಿಕ್ ಮತ್ತು ಹ್ಯಾರಿಯಾಗಲೀ, ಅಥವಾ ಒಬ್ಬ ಅನ್ಯಮತೀಯನಾಗಲೀ ಅವುಗಳು ಜಗತ್ತಿನ ಅತಿ ಸರ್ವೋತ್ಕೃಷ್ಟ ಗ್ರಂಥಗಳೆಂದು ಸಾರಿದರೆ, ಆಗ ನಮ್ಮ ವೇದ ಪುರಾಣಗಳ ಬಗ್ಗೆ ನಮಗೆ ಅಭಿಮಾನ ಹುಟ್ಟುತ್ತೆ. ನಮ್ಮವರೇ ಯಾರಾದರೂ ಅವು ಚೆನ್ನಾಗಿವೆಯೆಂದರೆ ಆತನೊಬ್ಬ ಹುಚ್ಚನೆಂದೂ, ಅವನನ್ನು ಜಾಗ್ರತೆಯಾಗಿ ಹುಚ್ಚರ ಆಸ್ಪತ್ರೆಗೆ ಸೇರಿಸಬೇಕೆಂದು ಹೇಳುತ್ತೇವೆ. ನಮ್ಮಲ್ಲಿರುವ ಹಿರಿಮೆಯನ್ನು ನಮ್ಮವರು ತೋರಿಸಿಕೊಟ್ಟರೆ ನಾವು ಮನ್ನಣೆ ಕೊಡುವುದಿಲ್ಲ. ಅದನ್ನು ಅನ್ಯಮತೀಯರು, ಅನ್ಯದೇಶದವರು ತೋರಿಸಿಕೊಡಬೇಕು. ನಮ್ಮ ಕಲಾವಿದರ ಬಗ್ಗೆಯೂ ಸಹ ನಾವು ಇದೇ ದೃಷ್ಟಿಯನ್ನಿಟ್ಟುಕೊಂಡಿದೇವೆ ಕವಿ ರವೀಂದ್ರರಿಗೆ ನೋಬೆಲ್ ಪಾರಿತೋಷಕ ಬಂದ ಮೇಲೆಯೇ ಅವರ ಹಿರಿಮೆಯು ಅರಿವಾಯ್ತು ನಮಗೆ. ಮ್ಯಾಕ್ಸ್‌ಮುಲ್ಲರ್ ನಮಗೆ ವೇದ ಮತ್ತು ಉಪನಿಷತ್ತುಗಳ ಭಂಡಾರವನ್ನು ತೆರೆದಿಡಬೇಕಾಯಿತು. ಆನಿಬೆಸೆಂಟ್ ಗೀತಾಮೃತವನ್ನು ಪಾನ ಮಾಡಿಸಬೇಕಾಯಿತು. ಇದನ್ನು ನಮ್ಮವರ ಮೂರ್ಖತನವೆಂದು ಕರೆಯಬೇಕೋ, ಭಾರತಾಂಬೆಯ ದುರ್ದೈವವೆಂದು ಕರೆಯಬೇಕೋ ನಮಗೆ ತಿಳಿಯದು.

ನೈಚ್ಚ ಮನೋಭಾವಕ್ಕೆ ನಮ್ಮ ದೇಶವು ತೌರುಮನೆಯಾಗಿದೆ. ಬಾಲನಟಿ, (ಈಗಲ್ಲ!) ವಾಸಂತಿ ಇಂಡಿಯನ್ ಷರ್ಲಿಟೆಂಪಲ್ ಆದಳು.

ಹಾಸ್ಯನಟ ನೂರ್ ಮುಹಮುದ್ 'ಚಾರ್ಲಿ'ಯಾದ. (ಚಾರ್ಲಿ ಚಾಪ್ಲಿನ್ನಿನ ತುಂಡು) ಪ್ರತಿಯೊಂದು ಔಷಧಿಯಾಗಲಿ, ಪದಾರ್ಥವಾಗಲೀ ಒಂದು ವಿದೇಶಿ ವಸ್ತುವಿನೊಂದಿಗೆ ಹೋಲುತ್ತದೆಯೆಂದರೆ ಆಗ ಅವರಿಗೆ ತೃಪ್ತಿ. ಬರಹಗಾರರಿಗೆ ಸಹ ಈ ಹುಚ್ಚು ಬಿಟ್ಟಿಲ್ಲ ' ತಾವೊಬ್ಬ ವಿದೇಶಿ ಬರಹಗಾರರನ್ನು ಹೋಲಬೇಕೆಂದಾಸೆ, ಅಥವಾ, ಒಬ್ಬ ವಿದೇಶಿ ಬರಹಗಾರನಿಗೆ ಹೋಲಿಸಲ್ಪಡಬೇಕೆಂಬ ಹಂಬಲ.

ವೈದಿಕರ ಮನೆತನದಲ್ಲಿ ಹುಟ್ಟಿದ ಆಚಾರ್ಯರು, ಜೋಯಿಸರು, ಮತ್ತು ದೀಕ್ಷಿತರು ಮುಂತಾದವರು ರಾಯರುಗಳಾಗುತ್ತಾರೆ. ತಾವು ವೈದಿಕರೆನಿಸಿಕೊಂಡರೆ ಅವರಿಗೆ ಅಪಮಾನ ಇನ್ನು ಕೆಲವರು ತಮ್ಮ ಹೆಸರುಗಳು ಆಂಗ್ಲರ ಹೆಸರುಗಳಾಗುವಂತೆ ಬಹಳವಾಗಿ ಶ್ರಮಿಸುತ್ತಾರೆ

ರಮೇಶನ್ ಎಂಬ ಹೆಸರು ಆರ್. ಮೇಸನ್ ಆಗಿ ಮಾರ್ಪಡುತ್ತದೆ. ತ್ಯಾಗರಾಜನ್, ಟಿ. ಆರ್ ಜಾನ್ ಆಗುತ್ತೆ. ಪರಮೇಶ್ವರನ್, ಪಿ. ವ್ಯಾರೆನ್ ಆಗುತ್ತೆ. ಹೀಗೆಯೇ ತಮ್ಮ ಹೆಸರುಗಳನ್ನು ಅಷ್ಟಾವಕ್ರವಾಗಿ ಮಾಡಿಕೊಂಡಿದ್ದಾರೆ.

ಉಚ್ಚ ಮನೋವೃತ್ತಿಯು ಸಹ ನೈಚ್ಯ ಮನೋವೃತ್ತಿಯ ರೂಪಾಂತರವೆಂದೇ ಹೇಳಬಹುದು. ತಮ್ಮ ಕೀಳುತನವನ್ನು ಮುಚ್ಚಲು ಉಚ್ಚ ಭಾವನೆಯ ಸೋಗು ಹಾಕಿಕೊಳ್ಳುವದಾಗಿದೆ.

"ನಮ್ಮತನ"ವೆಂಬುದೊಂದು ಇರಬೇಕು. ನಾವೇಕೆ ಅನುಕರಣ ಸಾಮ್ರಾಜ್ಯದಲ್ಲಿ ನಲಿಯಬೇಕು. ಒಂದರ ಹಿರಿಮೆಯ ಛಾಯೆಯಲ್ಲಿ ನಾವೇಕೆ ಮೆರೆಯಬೇಕು, ಬೇರೆಯವರ ತಮ್ಮಟೆಯನ್ನು ನಾವು ಎಲ್ಲಿಯವರೆಗೆ ಹೊಡೆಯಬೇಕು?

# ಮನೆಗೆಲಸ

ಸ್ತ್ರೀ ಸ್ವಾತಂತ್ರ್ಯದ ಆಂದೋಳನ ಈಗ ಶಿಖರವನ್ನೇ ಮುಟ್ಟಿದೆ. ಈ ಕೂಗಿನಲ್ಲಿ ಮನೆಗೆಲಸದ ಮೇಲೆ ನಾನೊಂದು ಪ್ರಬಂಧವನ್ನು ಬರೆದರೆ ಕೇಳುವರಾರು? ಆದರೂ ಮನೆಗೆಲಸದ ಬಗ್ಗೆ ನಾನು ಹೆಚ್ಚು ಹೆಚ್ಚು ಆಲೋಚಿಸಿದಂತೆಲ್ಲ, ಅದರ ಭವ್ಯತೆಯು ನನ್ನನ್ನು ಮುಗ್ಧನನ್ನಾಗಿ ಮಾಡಿದೆ. ಅಲ್ಲದೆ ಈ ಆರಣ್ಯರೋದನಕ್ಕೆ ಗಂಡಸರ (ಹೆಂಡತಿ ಭಕ್ತರ) ಸಾನುಭೂತಿ ಇದೆಯೆಂಬ ಧೈರ್ಯ ಈ ಲೇಖನವನ್ನು ಬರೆಯಲು ನನ್ನನ್ನು ಪ್ರೇರೇಪಿಸಿದೆ.

ಮನೆಯಲ್ಲಿಯೇ ಇದ್ದುಕೊಂಡು ಹಗಲಿರಳೂ ತಾವು ದುಡಿಯ ಬೇಕೆಂದೂ, ಸ್ವಲ್ಪವಾದರೂ ವಿಶ್ರಾಂತಿಯೇ ಇಲ್ಲವೆಂದೂ ಅನೇಕ ಮಂದಿ ಹೆಂಗಸರು ದೂರುವುದನ್ನು ನಾನು ಕೇಳಿದ್ದೇನೆ. ನಾವೇ ಅದೃಷ್ಟಶಾಲಿ ಗಳಂತೆ! ಹೊರ ಪ್ರಪಂಚದಲ್ಲಿದ್ದು ಏನೇನೋ ಕಡಿದು ಕಟ್ಟಿ ಹಾಕುತ್ತೇವಂತೆ!!

ದುಡಿತ? ನಿಜವಾದ ದುಡಿತವಾರದು? ದಿನವೂ ಅದೇ ಆಫೀಸಿಗೆ ಹೋಗಬೇಕು, ದಿನವೂ ಮಾಡಿದ ಕೆಲಸವನ್ನೇ ಯಂತ್ರದಂತೆ ಮಾಡಬೇಕು. ಆಫೀಸ್ ಮುಗಿದಮೇಲೆ ನಾವು ಮಾಡಿದ್ದು ಏನೆಂದು ಯೋಚಿಸಿದರೆ 'ಶೂನ್ಯ' ಎಂಬ ಉತ್ತರ ಹೊರಬೀಳುತ್ತದೆ.

ನನ್ನ ಸ್ನೇಹಿತ ಬ್ಯಾಂಕ್ ಒಂದರಲ್ಲಿ ಗುಮಾಸ್ತೆಯಾಗಿದ್ದಾನೆ. ಅವನ ಕೆಲಸವನ್ನು ಕುರಿತೇ ವಿಮರ್ಶಿಸೋಣ. ನನ್ನ ಓವರ್‌ಡ್ರಾಫ್ಟ್‌ಗಳ ಲೆಕ್ಕವನ್ನು ಇಡುವುದು ಅವನ ಅನೇಕ ಕೆಲಸಗಳಲ್ಲಿ ಒಂದು. ಇಡೀದಿನ ದುಡಿದು ಅವನು ತನ್ನ ಹೆಂಡತಿಗೆ ಹೇಳುವುದಾದರೂ ಏನು? ನಾಡಿಗೇರ ಬ್ಯಾಂಕಿಗೆ ಇನ್ನೂ ಬಹಳ ಸಾಲ ಕೊಡಬೇಕು. ವೃಷಭೇಂದ್ರಯ್ಯನವರು

ಈ ದಿನ ಹತ್ತು ಸಾವಿರ ರೂಪಾಯಿಗಳನ್ನು ಡಿಪಾಜಿಟ್ ಮಾಡಿದರು. ಮನೆಯಲ್ಲಿ ತರಕಾರಿಗೆ ಒಂದಾಣೆ ಇಲ್ಲದೆ ಪೇಚಾಡುತ್ತಿರುವಾಗ ಈ ಸಾವಿರಗಳ ಮಾತನ್ನು ಕೇಳಿ ಆಕೆ ಕೆರಳಿದ ಕೇಸರಿಯಂತೆ ಆಗುವುದು ಸಹಜ ತಾನೇ? ಇನ್ನು ಆ ಬ್ಯಾಂಕ್ ಗುಮಾಸ್ತೆಗೆ ಬ್ಯಾಂಕ್ ವಿನಹ ಬೇರೆ ಪ್ರಪಂಚವೇ ತಿಳಿಯದು! ಅವನು ಬೇರೆ ವಿಷಯಗಳ ಮೇಲೆ ಮಾತನಾಡುವದಾದರೂ ಹೇಗೆ?

ಅದೇ ಆ ಗುಮಾಸ್ತೆಯ ಹೆಂಡತಿಯನ್ನು ನೋಡಿ. ಆಕೆಯೂ ದುಡಿದಿದ್ದಾಳೆ. ಆದರೆ ಆ ದುಡಿತ ನಿರರ್ಥಕಾರಿಯಾದುದಲ್ಲ. ಪಾತ್ರೆಗಳನ್ನು ಚೆನ್ನಾಗಿ ಉಜ್ಜಿದ್ದಾಳೆ ಅದರಲ್ಲಿ ಮುಖವನ್ನು ಬೇಕಾದರೂ ನೋಡಿಕೊಳ್ಳಬಹುದು. ಸಾರಿಸಿ ರಂಗೋಲೆ ಹಾಕಿದ್ದಾಳೆ. ತಾನು ಏನು ಮಾಡಿದ್ದಾಳೆಂಬುದನ್ನು ತೋರಿಸಬಲ್ಲಳು. ಗಂಡನು ಮನೆಯಲ್ಲಿಲ್ಲದಾಗ ಎರಡು ಬಗೆಯ ತಿಂಡಿಗಳನ್ನು ಮಾಡಿಕೊಂಡು ತಿಂದಿದ್ದರೂ, ಆ ಪಾತ್ರೆಗಳನ್ನೂ ಕಪ್ ಸಾಸರ್‌ಗಳನ್ನೂ ಚೆನ್ನಾಗಿ ತೊಳೆದಿದ್ದಾಳೆ, ಪಾತ್ರೆಗಳನ್ನು ಬೆಳಗೆ ಮಾಡುವುದು ಒಂದು ಕೆಲಸವಲ್ಲವೇ? ಜೀವನದ ಝರಿಯಲ್ಲಿ ಆಕೆ ಈಸು ಬಿದ್ದಿದ್ದಾಳೆ. ಪ್ರವಾಹದೊಡನೆ ತೇಲಿಹೋಗಿದ್ದಾಳೆ. ಆದರೆ ನಾಡಿಗೇರನ ಓವರ್‌ಡ್ರಾಫ್ಟ್ ಲೆಕ್ಕವಿಡುವ ಆ ಬ್ಯಾಂಕ್ ಗುಮಾಸ್ತೆಗೆ ಜೀವನ ಎಂದರೆ ಕೊಚ್ಚೆಯಲ್ಲಿ ಎತ್ತಿಹಾಕಿದ ಒಂದು ಸೀಸದ ಗುಂಡಿನಂತೆ.

ಇನ್ನು ಈ ತರಹೆಯ ಮನೆಗೆಲಸವನ್ನು ನಾನು ಮಾಡಿಲ್ಲವೆಂದು ನೀವು ಭಾವಿಸಬೇಡಿ ಆಫೀಸಿನ ಫೈಲ್‌ಗಳನ್ನು ಸರಿಯಾಗಿ ಜೋಡಿಸುವುದು, ದೂಳು ಹೊಡೆದು ಆಯಾ ಪದಾರ್ಥಗಳನ್ನು ಅದರದರ ಸ್ಥಳದಲ್ಲೇ ಇಡುವುದು ಮುಂತಾದ ಅನೇಕ ಕೆಲಸಗಳನ್ನು ಯಶಸ್ವಿಯಾಗಿ ಮಾಡಿದ್ದೇನೆ. ಈ ಅನುಭವ ಇರುವದರಿಂದಲೇ ಹೆಂಗಸರಿಗೆ ಮನೆಗಳನ್ನು ಸರಿಯಾಗಿ ಮಾಡಲು ಬರುವದಿಲ್ಲವೆಂದು ನಾನು ಧೈರ್ಯವಾಗಿ ಹೇಳುತ್ತೇನೆ.

ಅಡಿಗೆಯ ವಿಷಯದಲ್ಲಿ ಅವರದೇ ಒಂದು ಕೈ ಮೇಲೆಂದು ನೀವು ವಾದಿಸಬಹುದು. ಇರಬಹುದು. ಅವರು ಅಡಿಗೆಯನ್ನು ಚೆನ್ನಾಗಿ ಮಾಡುತ್ತಾರೆಂದು ಒಪ್ಪಿಕೊಳ್ಳೋಣ. ಆದರೂ ಅಡಿಗೆಯ ಬಗ್ಗೆ ನಾವು ಸ್ವಲ್ಪ ಲಕ್ಷ್ಯಕೊಟ್ಟಲ್ಲಿ ಅವರನ್ನು ಮೀರಿಸಿಬಿಡಬಹುದು. 'ನಳಪಾಕ' ಎಂಬ

ಪ್ರಶಸ್ತಿಯು ಗಂಡಸಿಗೆ ಸೇರಿದ್ದೆಂಬುದು ನಿಮಗೆ ತಿಳಿದ ವಿಷಯವೇ ಆಗಿದೆ. ಅಡಿಗೆಯನ್ನು ಚೆನ್ನಾಗಿ ಮಾಡುವುದರಲ್ಲಿ ಭೀಮನು ಮಿಗಿಲಾದವನು. ಇವು ಪುರಾಣಗಳ ಮಾತಾಯಿತು. ಈಗಿನ ನಮ್ಮ ಐಯ್ಯರ್ ಬಂಧುಗಳೂ, ಉಡುಪಿಯ ಸಹೋದರರೂ ಅಡಿಗೆಯ ವಿಷಯದಲ್ಲಿ ಎಷ್ಟು ಖ್ಯಾತಿಗಳಿಸಿದ್ದಾರೆಂಬುದು ನಾನು ಬೇರೆ ಹೇಳಬೇಕಾಗಿಲ್ಲ.

ಮನೆಯನ್ನು ಚೊಕ್ಕಟಮಾಡುವದರಲ್ಲಿ ಹೆಂಗಸರಿಗೆ ನಾವು ಸಾದೂಗಲಾರೆವೆಂದು ನನ್ನ ಮಹಿಳಾ ಸ್ನೇಹಿತರೊಬ್ಬರು ವಾದ ಮಾಡಿದ್ದಾರೆ. ನಿಜ, ಅವರು ಹೇಳುವ ಹಾಗೆ ಚೊಕ್ಕಟಮಾಡುವುದರಲ್ಲಿ ಅವರಿಗೇ ಅಗ್ರತಾಂಬೂಲ ಸಲ್ಲಬೇಕು. ಆಯಾ ಪದಾಥಗಳನ್ನು ಅಲ್ಲಲ್ಲಿಡದೆ ತಪ್ಪು ತಪ್ಪಾದ ಸ್ಥಳಗಳಲ್ಲಿ ಇರಿಸುವುದೇ ಅವರ ಮೂಲ ಮಂತ್ರ. ಅವರ ಕಣ್ಣಿಗೆ ಕಾಣದಂತೆ ಮನೆಯಲ್ಲಿದ್ದ ಸಾಮಾನುಗಳನ್ನೆಲ್ಲಾ ಯಾವುದಾದರೂ ಒಂದು ಮೂಲೆಯಲ್ಲಿ ಒಟ್ಟುವುದು. ನಾಡಿಗೇರನ ಮನಸ್ಕೃತಿಗಳನ್ನು (Manuscripts) ತೊಟ್ಟಿಲಲ್ಲಿ ಹಾಕುವುದು; ತೊಟ್ಟಿಲ ಹಾಸಿಗೆ ಮತ್ತು ಅದಕ್ಕೆ ಸಂಬಂಧಿಸಿದ ಪದಾರ್ಥಗಳನ್ನು ನಾಡಿಗೇರನ ಮೇಜಿನ ಮೇಲಿಡುವುದು ಮುಂತಾದುವು ಅವರ ಹೆಗ್ಗಳಿಕೆಗಳಲ್ಲಿ ಕೆಲವು. ಹೊರಗಿನಿಂದ ಬಂದವರಿಗೆ ನಾಡಿಗೇರನ ಮನಸ್ಕೃತಿಗಳೂ ತೊಟ್ಟಿಲನ ಹಾಸಿಗೆ ಮತ್ತು ಅದಕ್ಕೆ ಸಂಬಂಧಿಸಿದ ಪದಾರ್ಥಗಳೂ ಕಣ್ಣಿಗೆ ಕಾಣಿಸದಿದ್ದರೆ ಸಾಕು. ಹೀಗೆ ಸಾಮಾನುಗಳನ್ನು ಅಡಗಿಸುವುದರಿಂದ ಕಾಲಹರಣವಾಗುವದಲ್ಲದೆ ಗಂಡಸರು ಮನೆ ಬಿಟ್ಟು ಹೋಗಲು ಕೂಡ ಕಾರಣವಾಗುತ್ತದೆ.

ಮನೆಗೆ ಯಾರು ಬರಲಿ, ಬರದಿರಲಿ, ಆಯಾ ಪದಾರ್ಥಗಳು ಅದರದರ ಸ್ಥಳದಲ್ಲೇ ಇರಬೇಕೆಂಬುದು ಗಂಡಸಿನ ತತ್ವ. ಈ ನಮ್ಮ ತತ್ವವನ್ನು ನೋಡಿ ನಮಗೆ ಚೊಕ್ಕಟತನವೇ ಗೊತ್ತಿಲ್ಲವೆಂದು ಮೂಗು ಮುರಿಯುತ್ತಾರೆ ಹೆಂಗಸರು.

ನನ್ನ ಸ್ನೇಹಿತ ಒಬ್ಬ ಸ್ಕೂಲ್ ಮೇಷ್ಟರು. ಒಂದು ಭಾನುವಾರ ಹೆಡ್ಮಾಸ್ಟರ ಹೆಂಡತಿ ಸ್ಕೂಲು ಮೇಷ್ಟರ ಹೆಂಡತಿಯನ್ನು ನೋಡಲು ಬಂದಿದ್ದರು. ಆಕೆ ಮನೆ ಚೊಕ್ಕಟ ಮಾಡುವ ಸೋಗಿನಲ್ಲಿ ಇದ್ದ ಬದ್ದ ಸಾಮಾನುಗಳನ್ನೆಲ್ಲಾ ಒಂದು ಕೊಠಡಿಯಲ್ಲಿ ತುಂಬಿದ್ದಳು. ಸೋಮವಾರ ಬೆಳಿಗ್ಗೆ

೬ ಘಂಟೆ ರೈಲಿಗೆ ಸ್ಕೂಲು ಇನ್‌ಸ್ಪೆಕ್ಟರು ಬರುತ್ತಾರೆಂದೂ ಅವರನ್ನು ಎದುರುಗೊಳ್ಳಲು ಸ್ಕೂಲುಮೇಸ್ಟರು ಅಂಗಿ ಬಟ್ಟೆ ಹಾಕಿಕೊಂಡು ಹೊರಡಲು ಪ್ರಯತ್ನಿಸಿದ ಹಿಂದಿನದಿನದ ಮನೆ ಚೊಕ್ಕಟತನದ ಫಲವಾಗಿ ಇವನ ಕೋಟು ರುಮಾಲುಗಳು ಸಿಕ್ಕಲೇ ಇಲ್ಲ. ಬೆಳಗಿನ ಜಾವದ ಸುಖನಿದ್ರೆಯಲ್ಲಿದ್ದ ಇವನ ಹೆಂಡತಿ ನಿದ್ದೆಗಣ್ಣಿನಲ್ಲಿ ಅವು ಸಿಕ್ಕಬಹುದಾದ ಸ್ಥಳವನ್ನು ಸೂಚಿಸಿದಳು ಆದರೂ ಅವು ಸಿಕ್ಕವು. ಅಂತೂ ಅಲಂಕೃತನಾಗಿ ಹೊರಟ. ಇನ್‌ಸ್ಪೆಕ್ಟರನು ಆಪಾದಮಸ್ತಕ ಪರ್ಯಂತ ಒಂದು ಸಾರಿ ನೋಡಿ ಕುಡಿ ಮೀಸೆ ತುದಿಯಲ್ಲೇ ನಕ್ಕ. ನನ್ನ ಸ್ನೇಹಿತನಿಗೆ ಈ ನಗು ಅರ್ಥವಾಗಲಿಲ್ಲ. ಇನ್‌ಸ್ಪೆಕ್ಟರೇ ಹೇಳಿದ. "ನಿಮ್ಮ ರುಮಾಲನ್ನು ಸ್ವಲ್ಪ ನೋಡಿಕೊಳ್ಳಿ" ನೋಡಿಕೊಂಡ—ಹೆಂಡತಿಯ ಪ್ರಿಂಟೆಡ್ ಸೀರೆ.

ನಾನು ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಒಂದು ಸಾರಿ ಮೇಸ್ಟರು ಹೋಮ್ ವರ್ಕ್ ಮಾಡಲು ಕೊಟ್ಟಿದ್ದರು ಅದನ್ನು ಮಾಡಿ ನನ್ನ ಚೀಲದಲ್ಲಿ ಹಾಕಿದ್ದೆ. ಆ ಮೇಸ್ಟರಿಗೆ ಕೊಟ್ಟೆ. ಆ ಮೇಸ್ಟರು ನನ್ನನ್ನು ಕರೆದು ನಾನು ಮಾಡಿಕೊಂಡು ಬಂದಿದ್ದ ಹೋಮ್ ವರ್ಕ್ ಓದಲು ಹೇಳಿದರು. ಹಾಳೆಗಳನ್ನು ತಿರುವಿಹಾಕಿದೆ. ಅದು ನನ್ನ ತಂಗಿಯ ಹಾಡಿನ ಪುಸ್ತಕವಾಗಿತ್ತು. ಹಿಂದಿನ ದಿನ ಮನೆಗೆ ಯಾರೋ ಬಂದಿದ್ದರಂತೆ. ಮನೆ ಚೊಕ್ಕಟ ಮಾಡಿದ್ದರು. ನನಗೂ 'ಚೊಕ್ಕಟ'ವಾಯಿತು.

ಹೆಂಗಸರಿಗೆ ಮನೆಗೆಲಸ ಮಾಡಲು ಬರುವದಿಲ್ಲವೆಂದಾಗಲೀ ಅವರನ್ನು ಬಯ್ಯಬೇಕೆಂದಾಗಲೀ ನಾನು ಈ ಲೇಖನವನ್ನು ಬರೆದಿಲ್ಲ ಮನೆಗೆಲಸದ ರೀತಿ ನೀತಿ ಮತ್ತು ತತ್ವಗಳು ಅವರಿಗೆ ತಿಳಿದಿಲ್ಲವೆಂಬುದನ್ನು ಸ್ಪಷ್ಟಪಡಿಸುವುದೇ ನನ್ನ ಉದ್ದೇಶವಾಗಿದೆ.

ನನ್ನ ಮನೆಗೆ ಯಾರಾದರೂ ಬಂದು ಹೋದ ಮೇಲೆ, ಪದಾರ್ಥಗಳನ್ನು ಅವುಗಳ ನಿರ್ದಿಷ್ಟ ಸ್ಥಳದಲ್ಲೇ ಇರಿಸಲು ನನಗೆ ಅರ್ಧ ದಿನ ಹಿಡಿಯುತ್ತೆ. ಅವರು ಬರುತ್ತಾರೆಂಬ ಸಂಗತಿ ತಿಳಿದೊಡನೆ ಮನೆ ಚೊಕ್ಕಟ ಮಾಡಲು ನನ್ನ ಹೆಂಡತಿ ಅರ್ಧ ದಿನ ಹಾಳು ಮಾಡಿರುತ್ತಾಳೆ.

ಮನೆಗೆಲಸ ಮಾಡಲು ನನಗೆ ಒಂದು ತರಹ ಸಂತೋಷ. ಅದರಲ್ಲಿ 'ನನ್ನತನ' ಇರುತ್ತೆ. ಮನೆಗೆಲಸದಲ್ಲಿ ನನಗಿರುವ ಚಾತುರ್ಯವನ್ನು

ಜಾಹೀರಾತು ಮಾಡಿಕೊಳ್ಳಲು ನಾನು ಹೊರಟಿಲ್ಲವೆಂಬುದನ್ನು ವಿನಯ ಪೂರ್ವಕವಾಗಿ ಅರಿಕೆ ಮಾಡಿಕೊಳ್ಳುತ್ತೇನೆ. ಆದರೆ ಹೆಂಗಸರು ಮನೆ ಗೆಲಸ ಮಾಡುವುದು ಬೇಸರದ ಕೆಲಸವೆಂದಾಗಲೀ, ಆ ಕೆಲಸಮಾಡಲು ಗಂಡಸರಿಗೆ ಬರುವುದಿಲ್ಲವೆಂಬ ವಾದಕ್ಕಾಗಲೀ, ಇದು ಉತ್ತರ ಇಷ್ಟೆ!

# ನಾಡಿಗೇರ ಕೃಷ್ಣರಾಯರ ನಿಧನ

ದೈವವಶಾತ್ ನಿನ್ನೆ ದಿವಸ ಮಧ್ಯಾಹ್ನ ಸಿಗರೇಟು ಸೇದುತ್ತಿರುವಾಗಲೇ ಶ್ರೀ ನಾಡಿಗೇರ ಕೃಷ್ಣರಾಯರು 'ಓಂ' ಎಂದರು ಎಂದು ತಿಳಿಸಲು ನಮಗೆ ವಿಷಾದವಾಗುತ್ತದೆ. "ಶರಣರ ಬಾಳು ಮರಣದಲ್ಲಿ ನೋಡು" ಎಂಬಂತೆ ಅವರು ಸದ್ವರ್ತನೆಯಲ್ಲಿ ತೊಡಗಿದ್ದಾಗಲೇ ಈ ಅತ್ಯಲ್ಪ ಘಟನೆ ನಡೆದುದು ಅವರ ಹಿರಿಮೆಗೆ ಸಾಕ್ಷೀಭೂತವಾಗಿದೆ. ಭಗವಂತನ ಆತ್ಮಕ್ಕೆ ಪರಮಾತ್ಮನು ಚಿರಶಾಂತಿ ಕೊಡಲೆಂದು ಪ್ರಾರ್ಥಿಸುತ್ತೇವೆ

ಶ್ರೀಯುತರು ಸರಳ ಜೀವಿಗಳು. ಬೇರೆ ತರಹ ಜೀವನ ನಡೆಸಲು ಸಾಧ್ಯವಿಲ್ಲದೆ ಅವರು ಆ ತರಹೆಯಾಗಿದ್ದರೆಂದು ಖಚಿತವಾಗಿ ನಮಗೆ ತಿಳಿಯಬಂದಿತೆ. ಗತಿಯಿಲ್ಲದೆ ಪತ್ರಿಕೋದ್ಯಮವನ್ನು ಕೈಗೊಂಡಿದ್ದರು. ಅದರಲ್ಲಿ ಅಭಿರುಚಿಯಿಲ್ಲದಿದ್ದರೂ ಇದೆಯೆಂದು ಸಾಧಿಸುವ ದಾರ್ಷ್ಟಿಕ ಅವರಲ್ಲಿತ್ತು.

ಅವರು ಬರೆದಿರುವ ಕಥೆಗಳು, ಬರೀ ಓರೆ ನೋಟದಂತೆ ಅರೆ ಸಪ್ಪೆಯಾದವು. ಹೋಟಲಿನ ಹಾಲಿನಂತೆ ನೀರಸವಾದವು, ವೇಶ್ಯೆಯ ಪ್ರೇಮದಂತೆ ಶುಷ್ಕವಾದವು ಅವು ಅವರ ಹಿಂದೆಯೇ ಹಾರಿಹೋಗಿವೆಯೆಂದು ನಾವು ಧಾರಾಳವಾಗಿ ಹೇಳಬಹುದು.

ಅವರು ಕೆಲವು ಹರಟೆಗಳನ್ನು ಬರೆದಿದ್ದೂ ಉಂಟು. ಅವಾದರೂ ಪಕ್ಕಾ ತಲೆಹರಟೆಗಳು. ಎಲ್ಲಿದರಲ್ಲಿಯೂ ಕೊಂಕು, ಕಹಿಮಾತು, ನಂಜು. ಹಾಸ್ಯದ ಮರೆಯಲ್ಲಿ ಇತರರಿಗೆ ನೋವುಂಟುಮಾಡಿದ ಪ್ರಸಂಗಗಳು ನಮಗೆ ಗೊತ್ತಿವೆ. ಅವರು ಅಷ್ಟು ಹಾಸ್ಯದ ಮೂಟೆ ಬರೆದಿದ್ದರೂ ಎಲ್ಲೋ ಒಂದೆರಡು ಚೆನ್ನಾಗಿವೆ, ಅಷ್ಟೆ.

ಶ್ರೀಯುತರು ಮಾತನಾಡುವುದರಲ್ಲಿ ಮುಂದಾದರೂ ಕೆಲಸದಲ್ಲಿ ಬಹು ಹಿಂದು. ಎಲ್ಲವನ್ನೂ ಮಾಡುತ್ತೇನೆಂದು ಎದೆತಟ್ಟಿ ಹೇಳಿ ಆಯುತ ಹೊತ್ತಿನಲ್ಲಿ ಕಣ್ಮರೆಯಾಗುತ್ತಿದ್ದರು, ಸ್ವಪ್ರತಿಷ್ಠೆ ಬಹಳವಾಗಿತ್ತು. 'ನಾನು' ಎಂದವನ ಮೇಲೆ ' ಗುರ್ ' ಅನ್ನುವ ಶುನಕ ಸ್ವಭಾವ ಅವರಲ್ಲಿ ಮನೆ ಮಾಡಿತ್ತು.

ಕಾದಂಬರಿಗಳನು ಓದುವದರಲ್ಲಿ ಅವರಿಗೆ ಆಸಕ್ತಿ ಬಹಳ. ಆದರೆ ವಿಚಾರಪೂರಿತ ಗ್ರಂಥಗಳ ವಿಷಯ ಎತ್ತಿದರೆ ಅವರಿಗೆ ತಲೆನೋವು ಬರುತ್ತಿತ್ತು

ಇವರಿಗೆ ಇತ್ತೀಚೆಗೆ ಪ್ರಗತಿಶೀಲ ಸಾಹಿತ್ಯದ ವ್ಯಾಧಿ ಅಂಟಿತ್ತು. ಅವರ ಬರಹಗಳನ್ನು ನೋಡಿದಾಗ ಅದರಲ್ಲಿ ಪ್ರಗತಿಯ ಕುರುಹಾಗಲೀ, ಸಾಹಿತ್ಯದ ವಾಸನೆಯಾಗಲೀ ಇರಲಿಲ್ಲ. ಇನ್ನು ಶೀಲದ ಸೊಲ್ಲೆಲ್ಲಿಂದ ಬಂತು!

ನಂಬಿದ ನೆಚ್ಚಿನ ಸ್ನೇಹಿತರ ಬಗ್ಗೆ ಸಹ ಕಟುವಾಗಿ ಟೀಕಿಸುವುದು ಅವರ ಹುಟ್ಟುಗುಣವಾಗಿತ್ತು. ವೈಯುಕ್ತಿಕವಾಗಿ ತಮಗೆ ಅವರ ಬಗ್ಗೆ ದ್ವೇಷಭಾವನೆ ಇಲ್ಲವೆಂತ ದೊಡ್ಡ ದನಿಯಲ್ಲಿ ಹೇಳಿದರೂ ಇತ್ತೆಂಬ ಅನುಮಾನ ನಮಗೆ ಇದ್ದೇ ಇದೆ. ದಿವಂಗತ ನಾಡಿಗೇರರ ಇನ್ನೊಂದು ಮಹಾ ಕೆಟ್ಟ ಸ್ವಭಾವವೆಂದರೆ ಅವರು ಪ್ರತಿಯೊಂದನ್ನೂ ವಕ್ರವಾಗಿ ನೋಡುತ್ತಿದ್ದರು. ' ನೇರ ' ಎಂಬ ಪದ ಅವರ ಶಬ್ದಕೋಶದಲ್ಲಿಯೇ ಇರಲಿಲ್ಲ. ಅವರ ದೃಷ್ಟಿಯಲ್ಲಿ ಪಾವಿತ್ರ್ಯವೆಂಬುದು ಇರಲೇ ಇಲ್ಲ. ಒಂದು ತರಹದ ವಿನಾಶಕಾರಕ ಬುದ್ಧಿ. ಅವರ ವಿಚಾರ ಮತ್ತು ಬರಹಗಳಲ್ಲಿ ರಚನಾತ್ಮಕ ದೃಷ್ಟಿಯ ಸೊಲ್ಲೇ ಇರಲಿಲ್ಲ.

ಅವರ ಬಡಕಲ ಶರೀರವನ್ನು ನೋಡಿದವರಿಗೆ ಅವರ ಈ ಸಾವು ಆಶ್ಚರ್ಯವನ್ನುಂಟುಮಾಡದಿರದು. ಆದರೂ ಒಂದು ವಿಷಯ. ಮಡಿ ಕೋಲಿನಂತಿದ್ದ ಆ ಪ್ರಾಣಿಗೆ ತಿನಸು ಕಂಡರೆ ಬಹು ಆಸೆ ಅವರಿಗೆ ಅಜೀರ್ಣ ರೋಗ ಉಂಟಾಗಿ ಅವರು ಮೃತಿ ಹೊಂದಿದ್ದರೆ ಅವರ ಆತ್ಮಕ್ಕೆ ಖಂಡಿತವಾಗಿಯೂ ಶಾಂತಿ ದೊರೆಯುತ್ತಿತ್ತು.

ಜೀವನದಲ್ಲಿ ನಿರಾಸಕ್ತಿ ಹೊಂದಿತ್ತು ಈ ಪ್ರಾಣಿ. ಅದಕ್ಕೆ ಯಾವುದೂ ಆಕರ್ಷಿಸುವಂತಿರಲಿಲ್ಲ. ಅದಕ್ಕೆ ಪ್ರವಾಸವೆಂದರೆ ಬಹಳ ಆಸೆ. ಈ ಆಸೆ

ಯನ್ನು ಪೂರೈಸಿಕೊಳ್ಳಲೋಸುಗವೇ ಅದು ಪರಲೋಕ ಪ್ರವಾಸವನ್ನು ಕೈಗೊಂಡಿತೆಂದು ತಿಳಿದವರು ಹೇಳುತ್ತಾರೆ.

ಮೃತರಿಗೆ ಸ್ನೇಹಿತ ಬಳಗ ತುಂಬಾ ಇತ್ತು. ಹಾಗ್ಯಾದವೆಂದರೆ ಮಿಲಿಟರಿಯವರನ್ನು ಕಂಡಂತೆ ಭಯಪಡುತ್ತಿದ್ದರು. ಯಾರೊಂದಿಗೂ ಜಗಳ ಮಾಡುವ ಸ್ವಭಾವದವರಲ್ಲ. ಎಲ್ಲರೊಂಧಿಗೂ ಹೊಂದಿಕೊಂಡು ಹೋಗುವಂತಹ ಮೃದುಸ್ವಭಾವ, ಈ ಸ್ವಭಾವಕ್ಕೆ ಕಾರಣ ಅವರ ಆಳತನವೇ ಎಂದು ಅವರ ಗುಟ್ಟನ್ನರಿತ ಅವರ ಸ್ಥೂಲಕಾಯ ಮಿತ್ರರಾದ ಶ್ರೀ|| ಚಾಳೀಶ್ವರರು ಅಭಿಪ್ರಾಯಪಟ್ಟಿದ್ದಾರೆ ಎಲ್ಲರೂ 'ಜೀವವಿಮೆ' 'ಬೆಂಕಿ ವಿಮೆ' ಮಾಡಿಸಿದ್ದರೆ ಇವರು 'ಗಾಳಿ ವಿಮೆ' ಮಾಡಿಸಿದ್ದರೆಂದು ಇವರ ಉಯಿಲು ಪತ್ರದಿಂದ ತಿಳಿದು ಬಂದಿದೆ.

ದಿವಂಗತ ಕೃಷ್ಣರಾಯರು ಶ್ರೇಷ್ಠ ಈಜುಗಾರರು. ಕಾಫೀ ನದಿಯಲ್ಲಿ ಏಕೆ, ಕಾಫಿ ಸಮುದ್ರದಲ್ಲಿ ಸಹ ಈಜುವ ಸಾಮರ್ಥ್ಯ ಅವರಲ್ಲಿತ್ತು. ಆದರೂ ಭವಸಾಗರದಲ್ಲಿ ಈಜುವುದಕ್ಕೆ ಇವರು ಎಂದೂ ಹಿಂದುಮುಂದು ನೋಡಲಿಲ್ಲವೆಂದು ಇವರ ಆತ್ಮೀಯರು ಅಭಿಪ್ರಾಯಪಟ್ಟಿದ್ದಾರೆ.

ಮೃತರ ನಿಧನ ವಾರ್ತೆಯನ್ನು ಕೇಳಿದ ಕೂಡಲೇ ಊರಿನ ಸಂಪ್ರದಾಯ ಶರಣ ಸಂಘದವರು ಗುಟ್ಟಾಗಿ ಸಭೆ ಕರೆದು ತಮ್ಮ ಹೃತ್ಪೂರ್ವಕ ಸಂತೋಷವನ್ನು ವ್ಯಕ್ತಪಡಿಸಿದರೆಂದು, ಸಭೆಯ ಕಾರ್ಯಕಲಾಪಗಳನ್ನು ಗವಾಕ್ಷಿಯಿಂದ ನೋಡಿದ ಸುದ್ದಿಗಾರರೊಬ್ಬರು ವರದಿ ಮಾಡಿದ್ದಾರೆ.

ಶ್ರೀ ನಾಡಿಗೇರರು ಮಾತುಗಾರರು. ಇವರ ಮಾತು ಕೇಳಲು ಅನೇಕರು ಕುತೂಹಲಪಡುತ್ತಿದ್ದರು. ಆದರೂ ರಾಯರಿಗೆ ಏಕಾಂತವೆಂದರೆ ಪ್ರೀತಿ. ಇವರು ಒಂಟಿಯಾಗಿಯೇ ಇಹಲೋಕ ಯಾತ್ರೆ ಮಾಡಿದ್ದೂ, ಹಿಂದೆ ಯಾರನ್ನೂ ಕರೆದುಕೊಂಡು ಹೋಗದಿದ್ದದ್ದೂ, ಈ ಅಂಶವನ್ನು ಸ್ಪಷ್ಟಪಡಿಸುತ್ತಿದೆ.

ಇವರು ನಾಲ್ಕುಜನಕ್ಕೆ ಬೇಕಾದವರು ಎಂಬ ಅಂಶವು ಸಹ ಕೈಲಾಸಂರವರು ಒಂದೆಡೆ ಹೇಳಿರುವಂತೆ ಇವರು ಅಂತ್ಯದಲ್ಲಿ ತಮ್ಮ ಹೊರೆಯನ್ನೆಲ್ಲಾ ನಾಲ್ಕೇ ಜನಗಳ ಮೇಲೆ ಹೇರಿದಾಗ ಕಂಡವರಿಗೆಲ್ಲಾ ಸ್ಪಷ್ಟವಾಯಿತು.

ದಿವಂಗತರಿಗೆ. ಸೋಪು, ಕೇಶತೈಲಗಳು, ಬಾಚಣಿಕೆ, ಬ್ಲೇಡ್

ಮುಂತಾದುವುಗಳನ್ನು ಕಂಡರೆ, ಬದ್ಧದ್ವೇಷವಿತ್ತೆಂದೇ ಅವರನ್ನು ಕಂಡ ಕೂಡಲೇ ತಿಳಿಯುಬರುತ್ತಿತ್ತು. ಅವರ ಈ ಒಂದು ವಿಶಿಷ್ಟ ಗುಣದಿಂದ ಅವರಿಗೆ 'ಕೂಲಿಕಾರ ಪತ್ರಿಕೋದ್ಯೋಗಿ' ಎಂಬ ಪ್ರಶಸ್ತಿಯನ್ನು ಅಂತರ ರಾಷ್ಟ್ರೀಯ ಕೂಲಿಕಾರ ಸಂಸ್ಥೆಯು ಕೊಡುವಂತೆ ಮಾಡಿತು

ಶ್ರೀ ರಾಯರಂತಹ ಗಣ್ಯವ್ಯಕ್ತಿ ಮಾಯವಾದುದರಿಂದ ದೇಶದಲ್ಲಿನ ಗಲಭೆ ಕೊಂಚವಾದರೂ ಕಡಿಮೆಯಾಯಿತೆಂಬ ಸದಾಶಯದಿಂದ ಈ ಸ್ವಯಂ ಸ್ಮಾರಕ ಲೇಖನವನ್ನು ಮುಗಿಯಿಸಲು ವಾಚಕರ ಅನುಮತಿ ಕೇಳುವೆನು.

---

# ಮುಂದಿನ ಜನ್ಮದಲ್ಲಿ

'ದೇಶಬಂಧು' ವಾರ ಪತ್ರಿಕೆಯಲ್ಲಿ 'ನಿಧನ'ನಾದ ನನ್ನನ್ನು ಯಾರೋ ಪುಣ್ಯಾತ್ಮರು ಸಂಜೀವಿನಿ ಸಿಂಪಡಿಸಿ ಬದುಕಿಸಿದ್ದಾರೆ. ಬದುಕಿಸಿದ್ದಷ್ಟೇ ಅಲ್ಲ. ಯಾವ ಜನ್ಮ ಬೇಕು, ಅಂತ ಬೇರೆ ವರಪ್ರದಾನ ಮಾಡಿದ್ದಾರೆ. ವಿಷ್ಣುವು ಧೃವನಿಗೆ 'ನಿನಗೇನು ವರ ಬೇಕು' ಅಂತ ಕೇಳಿದಂತೆ ನನಗೂ 'ಯಾವ ಜನ್ಮ ಬೇಕು?' ಅಂತ ಕೇಳಿದ್ದಾರೆ ಅವರೇನೋ ವರ ಕೊಟ್ಟರು. ಬದುಕಿದ್ದಾಗಲೇ ಯಾವಾಗ ಸತ್ತೇನೋ ಅಂತ ಹಂಬಲಿಸುತ್ತಿದ್ದ ನನಗೆ ಈಗ ಯಾವಾಗ ಜನ್ಮವೆತ್ತೇನೋ ಅಂತ ಜೀವ ಮಿಡಿಯುತ್ತಿದೆ ಮನುಷ್ಯನ ಸ್ಥಿತಿಯೇ ಹೀಗೆ. ಒಂದಿಲ್ಲದಾಗ ಅದು ಬೇಕೆನಿಸುತ್ತೆ. ಅದು ದೊರೆತಾಗ ಅದು ಬೇಡವೆನಿಸಿ ಇನ್ನೊಂದು ಯಾವುದೋ ಬೇಕೆನಿಸುತ್ತೆ. ಆದರೆ ನಾನೀಗ ಮನುಷ್ಯನಲ್ಲ, ಪಿಶಾಚಿಯೇ ಇರಬೇಕು. ಪಿಶಾಚಿಗೆ ಇತರರನ್ನು ಕಾಡಬೇಕೆಂಬ ಹಂಬಲ ಇರುತ್ತದೆಂತ ಕೇಳಿದ್ದೇನೆ ನನಗೆ ಮಾತ್ರ ಇತರರನ್ನು ಕಾಡಿದರ ಎಂದಿಗೂ ತೃಪ್ತಿಯಾಗದು.

ಹಿಂದಿನ ಜನ್ಮದ ವಾಸನಾವಿಶೇಷದಿಂದ, ಅಭಿಮಾನದಿಂದ, ಭಾರತೀಯನಾಗೇ ಹುಟ್ಟಬೇಕೆನಿಸುತ್ತೆ. ಆದರೆ ಯಾವ ಪ್ರಾಂತ್ಯದಲ್ಲಿ ಜನ್ಮವೆತ್ತಬೇಕು ಎಂಬ ಸಮಸ್ಯೆ ಬಗೆಹರಿಯದಾಗಿದೆ. ಮೊದಲೇನೋ ಕರ್ನಾಟಕದಲ್ಲಿ ಜನ್ಮವೆತ್ತಿದ್ದಾಯಿತು ಈಗ ಕರ್ನಾಟಕವೆಂದರೆ ಮೈಗೆ ಮುಳ್ಳು ಹಚ್ಚಿದಂತಾಗುತ್ತೆ. ಬಹಳ ಆಲಸ್ಯ ಸ್ವಭಾವದವರು. ಎಮ್ಮೆಯ ಚರ್ಮದಂತೆ ಬಹು ಗಟ್ಟಿ ಚರ್ಮದವರು. ಇತರರು ಬೈದರೂ, ಧಾಳಿ ಮಾಡಿದರೂ ತೆಪ್ಪಗಿರುತ್ತಾರೆ. ಸ್ವಾಭಿಮಾನಶೂನ್ಯಪಶುಗಳು! ಆಂಧ್ರರು ಅತಿವಿಲಾಸ ಪ್ರಿಯರು. ಹುಳಿ ಕಾರ ತಿಂದು, ಸ್ತ್ರೀಲೋಲರಾಗಿರುತ್ತಾರೆ.

ತಮಿಳರು ಚುರುಕು ಬುದ್ಧಿಯುವರಾದರೂ, ಮನೆಮುರುಕ ಬುದ್ಧಿಯುವರು. ಶ್ರಮಜೀವಿಗಳು. ಕಪಿಮುಷ್ಟಿ ಸ್ವಭಾವ ಅವರಲ್ಲಿ ಮನೆಮಾಡಿದೆ. ತಾವೂ ತಿನ್ನದೆ ಇತರರಿಗೆ ಕೊಡದೆ ಏನೋ ಮಾಡಿಬಿಡುತ್ತಾರೆ. ಅವರ ಜಿಪುಣ ತನ ಅಸಹ್ಯವನ್ನುಂಟುಮಾಡುತ್ತೆ. ಮರಾಠಿಗಳು ಜಗಳಗಂಟರು. ಜಗಳವಾಡದಿದ್ದರೆ ಅವರಿಗೆ ಊಟವೇ ಸೇರುವುದಿಲ್ಲ. ಅವರ ಸಹವಾಸ ಬೇಡವಪ್ಪಾ! ಗುಜರಾತಿನವರು ಅಮೆರಿಕನರಂತೆ ನಾಣ್ಯ ಪೂಜಕರು. ಎಲ್ಲವನ್ನೂ ರೂಪಾಯಿ, ಆಣೆ, ಪೈಗಳಿಂದ ತೂಗಿ ನೋಡುತ್ತಾರೆ. ಬಂಗಾಳಿಗಳು ಸಾಸುವೆ ಎಣ್ಣೆ ತಿಂದು ತಲೆಕಾಯಿಸಿಕೊಂಡು ಅದರ ಕಾವನ್ನೆಲ್ಲಾ ಹೊರ ಪ್ರಪಂಚಕ್ಕೂ ಬಿತ್ತರಿಸುತ್ತಾರೆ. ಆ ಪಂಜಾಬಿನ ಚಳಿ ತಡೆಯಲಾರೆ. ಥಾನುಗಟ್ಟಲೆ ಬಟ್ಟೆಯಿಂದ ಇಜಾರ ಹೊಲಿಸಿಕೊಳ್ಳ ಬೇಕೆಂದರೆ ಎಷ್ಟು ಹಣವಾಗುತ್ತೆ!

ಇನ್ನು ಹಿಂದ ಹೇಳಿದಂತೆ ಬರೀ ಅಭಿಮಾನದಿಂದಲೇ ಭಾರತದಲ್ಲಿಯೇ ಜನ್ಮವೆತ್ತಬೇಕೆಂದರೆ, ಹಾಳು ಆ ಕರಿ ಚರ್ಮ ತಪ್ಪದು. ಶ್ವೇತವರ್ಣೀಯರಿಂದ ಕಡೆಗಣ್ಣಿನಿಂದ ನೋಡಲ್ಪಟ್ಟು ಬದುಕಿದ್ದಾಗಲೇ ಸತ್ತಂತಾಗಿತ್ತು. ಎರಡನೆಯದಾಗಿ ನಾನು ಜನ್ಮ ಎತ್ತುವುದರೊಳಗಾಗಿ, ಭಾರತವು ಸ್ವತಂತ್ರ ವಾಗುತ್ತದೆಂಬ ನಂಬಿಕೆಯಾಗಲೂ ಏನಿದೆ? ಭಾರತ ಸ್ವಾತಂತ್ರ್ಯ ಒಂದು ಗಗನ ಕುಸುಮ. ನೋಡಲು ಬಹು ಚೆನ್ನು. ಆದರೆ ಕೈಗೆ ಸಿಲುಕದು. ಅಂಗೈನಲ್ಲಿ ತೋರುವ ವೈಕುಂಠದಂತೆ ಬ್ರಿಟಿಷರು 'ಇಗೋ ಕೊಟ್ಟೆ' 'ಅಗೋ ಕೊಟ್ಟೆ' ಅಂತ ಕಾಲ ತಳ್ಳುತ್ತಿದ್ದಾರೆ.

ಹೋಗಲಿ, ಪುಣ್ಯಾತ್ಮರು ವರ ಕೊಟ್ಟಿರುವಂತೆ ಬೇರೆ ಇನ್ಯಾವ ರಾಷ್ಟ್ರ ದಲ್ಲಿಯಾದರೂ ಜನ್ಮ ತಾಳೋಣವೆಂದರೆ ಅದಕ್ಕೂ ಮನಸ್ಸಾಗಲೊಲ್ಲದು. ಶ್ವೇತವರ್ಣೀಯರ ರಾಷ್ಟ್ರಗಳ ಕಡೆ ಗಮನ ಹೊರಳಿಸಿದರೆ ತಲೆ ಗಿರ್ರೆಂದು ತಿರುಗುತ್ತೆ. ಕಪ್ಪು ಜನಾಂಗದವರ ಮೇಲೆ ಸವಾರಿ ಮಾಡೇ ಅವರು ಹೊಟ್ಟೆ ಹೊರೆಯುಕೊಳ್ಳಬೇಕು. ಅವರ ಜೀವನ ದೃಷ್ಟಿ ನನಗೆ ಹಿಡಿಸದು. ಶುದ್ಧ ಭೌತಿಕ ತತ್ವವಾದಿಗಳು. ಇಂದಿರುವುದೆಲ್ಲಾ ನಿಜ. ನಾಳೆಯ ಗೊಡವೆ ಬೇಡ. ಇದು ಯಾರು ಹೇಳಿದರು? ನಿತ್ಯ ನಿರಂತರವಾದ ಜೀವಾತ್ಮ ನಿನ್ನೆ ಇತ್ತು, ಇಂದು ಇದೆ, ನಾಳೆ ಇರುತ್ತೆ.

ಚೀನಾ, ಜಪಾನ್, ಆಫ್ರಿಕಾ ಮುಂತಾದ ರಾಷ್ಟ್ರಗಳ ಕಡೆಗೂ ನನ್ನ ಮನಸ್ಸನ್ನು ಹರಿಬಿಟ್ಟಿದ್ದೇನೆ. ಉಹು, ಅಲ್ಲಿಯೂ ನನಗೆ ಸ್ಥಳವಿಲ್ಲ ಚೀನಾದವರ ಮೊಂಡ ಮೂಗು, ಮೂಗಿನಿಂದಲೇ ಆಡುವಮಾತು, ಯಾದವೀ ಕಲಹಗಳ ಸತತ ಯುದ್ಧ. ಜಪಾನಿನ ಆ ಕುದುರೆ ಮೂತಿಯ ಹೆಂಗಸರನ್ನು ನೋಡಿದಾಗ, ಇವರನ್ನು ಸುಂದರಿಯರೆಂದು ಹೇಳುವ ಆ ಗಂಡಸರ ಕಲಾಭಿಜ್ಞತೆಯು ಸುಟ್ಟ ಶೀರ ಕೆಳಮಟ್ಟದ್ದೆಂಬ ಅರಿವಾಗುತ್ತೆ. ಆಫ್ರಿಕಾದ ವಿಷಯ ನಿಮಗೆ ಗೊತ್ತೇ ಇದೆ. ಅದೊಂದು ಕಟಕಟೆಯಿಲ್ಲದ ಝೂ. ಆ ಕಾಡು ಮೃಗಗಳೊಂದಿಗೆ ನಾನೊಂದು ಕಾಡುಮೃಗ!

ಇರಲಿ, ಯಾವುದೋ ಒಂದು ರಾಷ್ಟ್ರದಲ್ಲಿ, ಒಂದು ಪ್ರಾಂತ್ಯದಲ್ಲಿ ಜನ್ಮವೆತ್ತಿದ್ದಾಯಿತೆಂದು ತಿಳಿಯೋಣ. ಆದರೆ, ಹೆಣ್ಣಾಗಿ ಹುಟ್ಟಬೇಕೆ, ಗಂಡಾಗಿ ಹುಟ್ಟಬೇಕೆ, ಎಂಬ ಪ್ರಶ್ನೆ ಎದುರು ಬಂದು ನಿಲ್ಲುತ್ತದೆ. ಇದಕ್ಕೆ ನೀರು ಕುಡಿದಂತ ಉತ್ತರ ಹೇಳಲು ಸಾಧ್ಯವಿಲ್ಲ. ಪುರುಷ ನಿರ್ಮಿತ ಶಾಸ್ತ್ರಗಳ, ಶಾಸನಗಳ ಶೃಂಖಲೆಗಳಿಂದ ಸ್ತ್ರೀ ಬಿಗಿಯಲ್ಪಟ್ಟಿದ್ದಾಳೆ. ಇದಕ್ಕೆ ಉದಾಹರಣೆಯೆಂದರೆ 'ಪಾತಿವ್ರತ್ಯ' ಎಂಬ ಪದವೇ ಸಾಕು. 'ಪಾತಿವ್ರತ್ಯ' ಶಬ್ದದ ಉತ್ಪತ್ತಿಗೆ ಕಾರಣರಾದ ಭೂಪರು 'ಸಾತಿವ್ರತ್ಯ' ಶಬ್ದವನ್ನೇಕೆ ನಿರ್ಮಾಣ ಮಾಡಲಿಲ್ಲ? ಸ್ತ್ರೀಗೆ ಪಾತಿವ್ರತ್ಯವು ಮುಕುಟ ಮಣಿಯಂತೆ. ಹಾಗಾದರೆ ಪುರುಷನಿಗೆ ಸಾತಿವ್ರತ್ಯವು ಒಡಕು ಗಾಜಿನ ತುಂಡೇ? ಇಲ್ಲಿಗೇ ಇದು ಮುಗಿಯಲಿಲ್ಲ ಎಲ್ಲಕ್ಕೂ ಪರಾಧೀನ. ಹೆಂಗಸು ಅಡ್ಡದಾರಿಗೆ ಬಿದ್ದರೆ ಮೂಲೆ ಗುಂಪಾದ ಶಾಸ್ತ್ರ ಪುರಾಣಗಳೆಲ್ಲ ಬಯಲಿಗೆ ಬರುತ್ತವೆ. ಆದರೆ ಗಂಡಸು, ಗಂಡಸು ಅವಳಿಗೆ ಜೀರ್ಣಶಕ್ತಿ ಹೆಚ್ಚಾಗಿದೆ. ಏನಾದರೂ ತಿಂದು ಜೀರ್ಣಿಸಿಕೊಳ್ಳುತ್ತಾನೆ. ಅವನನ್ನು ಅಲ್ಲಾಡಿಸವು.

ಇನ್ನು ಗಂಡಾಗಿ ಹುಟ್ಟಿದರೆ, ಜಟಕಾ ಕುದುರೆಯಂತೆ ವಿಶ್ರಾಂತಿ ಯಿಲ್ಲದ ದುಡಿಯುವುದು. ಗಾಣದ ಎತ್ತಿನಂತೆ ಸಂಸಾರ ಗಾಣದ ಸುತ್ತ ಒಂದೇ ಸಮನೆ ಸುತ್ತುವುದು. ಗಂಡ ಕೂಲಿಯಾಳಾಗಿ ಹೊರಗೆ ದುಡಿಯು ತ್ತಿದ್ದರೂ, ಹೆಂಡತಿ ಮನೆಯರಾಣಿ. ಆ ರಾಣಿಯ ಲಾಲನೆ ಪಾಲನೆ ಆಳಾದ ಅರಸ ನೋಡಿಕೊಳ್ಳಬೇಕು.

ಒಂದುವೇಳೆ ಹಿಂದಿನ ಜನ್ಮದಲ್ಲಿ ಗಂಡಾಗಿ ಹುಟ್ಟಿದ್ದ ವ್ಯಾಮೋಹ ದಿಂದ ಮುಂದಿನ ಜನ್ಮದಲ್ಲಿ ಗಂಡಾಗಿಯೇ ಜನ್ಮ ತಾಳೋಣವೆಂತ ಆಶಿಸಿದರೆ, ಯಾವ ಮತ, ಜಾತಿಯವರ ಮನೆಯಲ್ಲಿ ಹುಟ್ಟಬೇಕು? ಅವರು ಧನಿಕರಿರಬೇಕೆ, ದರಿದ್ರರಿರಬೇಕೆ?

ಹಿಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟಿ ಪಡಿಪಾಟಪಟ್ಟದ್ದು ಇನ್ನೂ ನೆನಪಿದೆ ಸ್ಕಾಲರ್‌ಷಿಪ್‌ಗಳಿಗೆ ಸೊನ್ನೆ, ನೌಕರಿ ದೊರೆಯುವ ಹಾಗಿಲ್ಲ. ನಮ್ಮ ವಿಷಯವಾಗಿ ಯಾವ ಪುಸ್ತಕ ಓದಿದರೂ ಯಾವ ಕತೆ ಓದಿದರೂ 'ಒಂದೂರಿನಲ್ಲಿ ಒಬ್ಬ ಬಡ ಬ್ರಾಹ್ಮಣನಿದ್ದ' ಅಂತ ಆರಂಭಿ ಸಿರುತ್ತಾರೆ. ಬ್ರಾಹ್ಮಣರು-ಬಡತನ ಅವಳಿಮಕ್ಕಳೆಂದು ಚಿಕ್ಕವನಾಗಿ ದ್ದಾಗ ಅನ್ನಿಸಿತ್ತು. ಆದರೆ ಅದು ಕಡೆಯವರೆಗೂ ಹಾಗೆಯೇ ಇರಬೇಕೆ!

ಜಗತ್ತಿನಲ್ಲಿ ಹೊಲೆಯನಾಗಿ ಹುಟ್ಟಿದರೂ ಚಿಂತೆಯಿಲ್ಲ, ಹಾರವನಾಗಿ ಹುಟ್ಟಬಾರದು. ಹೊಲೆಯನ ಬಗ್ಗೆ ಸರ್ಕಾರದವರು ಹಾಗು ಸಾರ್ವ ಜನಿಕರು ಅನುಕಂಪ ದೃಷ್ಟಿಯಿಂದ ನೋಡುತ್ತಾರೆ ಹಾರವನ ಹೆಸರು ಹೇಳಿದರೆ ಎಲ್ಲರೂ ಲಟಿಗೆ ಮುರಿಯುವವರೇ. ಅವನ ಹಿಂದಿನವರು ಮಾಡಿದ ಪಾಪಗಳನ್ನು ನೆನೆದು ಅವನ ಮೇಲೆ ಈಗಲೂ ಕತ್ತಿಕಟ್ಟಿ ಸಿಳ್ಳು ತ್ತಾರೆ. ಯೂರೋಪಿಯನ್ ರಾಷ್ಟ್ರಗಳಲ್ಲಿ ಯಹೂದಿಯರು, ಇಂಡಿಯಾ ದೇಶದಲ್ಲಿನ ಬ್ರಾಹ್ಮಣರು, ಇಬ್ಬರ ಗತಿಯೂ ಈಗ ಒಂದೇ ಎಂದು ಹೇಳ ಬಹುದಾಗಿದೆ. ಅಂತೂ ಯಾವ ಜಾತಿಯಲ್ಲೇ ಹುಟ್ಟಿದರೂ ಇನ್ನೊಂದು ಜಾತಿಯವರನ್ನು ಬಯ್ಯಬೇಕೆಂಬುದೂ, ದ್ವೇಷಿಸಬೇಕೆಂಬುದೂ ಒಂದು ನಿಯಮವಾಗೇ ಇದೆ. ಆದ್ದರಿಂದ ಯಾವ ಜಾತಿಯೂ ಬೇಡವೆಂದರೆ, ಇವನು ನಾಸ್ತಿಕನೆಂದು ಕಲ್ಲು ಎಸೆಯುತ್ತಾರೆ.

ಹಕ್ಕಿ ಪಕ್ಷಿಗಳಾದರೂ, ಮೃಗಪಶುಗಳಾದರೂ, ಜಲಚರಗಳಾದರೂ ಮನುಷ್ಯನಿಗೆ ದಾಸರಾಗಬೇಕು. ಅವನ ಆಹಾರವಾಗಬೇಕು. ಇದು ನನ್ನಿಂದ ಸಾಧ್ಯವಿಲ್ಲ.

ಈ ರಾದ್ಧಾಂತಗಳನ್ನೆಲ್ಲ ನೋಡಿದ ಮೇಲೆ ನನಗೆ ಯಾವ ಜನ್ಮವೂ ಬೇಡ ಎಂದೆನಿಸಿದೆ. ಅದೇ ರೀತಿಯಾಗಿ ಹೇಳಿಬಿಡುತ್ತೇನೆ.

---

# ಸಾಹಿತ್ಯ ಸೇವೆ?

ಕನಾ(ಣಾ)ರ್ಟಕ ಏಕೀಕರಣ. ಕನ್ನಡಿಗರ ಪರ್ವಕಾಲ ಇಂತಹ ಶುಭಸಮಯದಲ್ಲಿ ಮಿಂದು ಕರ್ನಾಟಕಮಾತೆಯ ಸೇವೆಯನ್ನು ಮಾಡಿ ದೇಹಸಾರ್ಥಕ್ಯ ಮಾಡಿಕೊಳ್ಳಲು ಎಷ್ಟು ಜನ ಕನ್ನಡಿಗರು ಕಾತುರರಾಗಿದ್ದಾರೆ! ಏನೋ ಇದೂ ಒಂದು ಅಂಟುಬೇನೆ. ಇದರ ನಿದರ್ಶನಾರ್ಥವಾಗಿ ಕನ್ನಡದಲ್ಲಿ ಎಷ್ಟೋ ಪತ್ರಿಕೆಗಳು ಜನ್ಮತಾಳಿವೆ. ಹಿಂದೆ ೧೯೩೦ರಲ್ಲಿ ಗಾಂಧಿಯ ಟೊಪ್ಪಿಗೆಗಳು ಕೆರೆಯ ಮೇಲಿನ ಬೆಳ್ಳಕ್ಕಿಗಳಂತೆ ಕಾಣುತ್ತಿದ್ದುವು. ಈಗ? ಆದರೂ, ಯಾರಾದರೂ ರಾಷ್ಟ್ರಭಕ್ತರು ಬಂದಾಗಾಗಲೀ, ಅಥವಾ ಸಭೆಗಳು ಸೇರಿದಾಗಾಗಲೀ ಮನೆಯಲ್ಲಿನ ಹುಡುಗರ ಟೊಪ್ಪಿಗೆಗಳನ್ನು ಕಸಿದುಕೊಂಡು ಅವುಗಳನ್ನು ಹಾಕಿಕೊಂಡು ವೇದಿಕೆಯ ಸಮೀಪ ಕೂಡುವ ರಾಷ್ಟ್ರಭಕ್ತರಷ್ಟು ಜನರಿಲ್ಲ. ಈಗೊಂದು ನೆನಪಾಯಿತು. ನಮ್ಮಲ್ಲಿ ದರ್ಬಾರಿಗೆ ಹೋಗುವವರು ಬಾಡಿಗೆ ಪೋಷಾಕು ಹಾಕುತ್ತಾರೆ. ಅದರಂತೆ. ಪ್ರಸಕ್ತ ವಿಷಯಕ್ಕೆ ಇದು ಬಹು ದೂರವಾಗಿರುವುದರಿಂದ ಇದು ಬೇಡ.

ಸಾಹಿತ್ಯಸೇವೆ ಮಾಡಬೇಕೆಂಬ ಉತ್ಸುಕ ಕನ್ನಡರಿಗೆ ನನ್ನದೂ ಒಂದು (Helping Hand) ಕೈ ಕೊಡಬೇಕೆಂದು ಈ ಲೇಖನ. ಸಾಹಿತ್ಯಸೇವೆ ಮಾಡುವುದು ಕಠಿಣವೆಂದು ಬಹು ಜನರು ತಿಳಿದಿದ್ದಾರೆ. ಅದೇಕೋ ನನಗೆ ಗೊತ್ತಾಗುವುದಿಲ್ಲ. ಕೆಲವರು ಹೆಚ್ಚಿನ ವಿದ್ಯೆ ಇರಬೇಕೆಂದೂ ಮತ್ತು ಪುರಾತನ ಗ್ರಂಥಗಳ ಶಾಂತಿಯಾಗಬೇಕೆಂದೂ ಹೇಳುವರು. ಕಾರಣವಿಲ್ಲ. ಅವರಿಗೆ ಇದು ಇಷ್ಟು ಕಠಿಣ ಸಮಸ್ಯೆಯಾಗಿರುವುದು ಸೋಜಿಗದ ವಿಷಯ. ಆದುದರಿಂದ ಜನಸಾಮಾನ್ಯರು ಕೂಡ ನಿರಾಯಾಸವಾಗಿ ಸಾಹಿತ್ಯಸೇವೆ ಮಾಡುವುದಕ್ಕೆ ಆಧುನಿಕ ಪರಿಸ್ಥಿತಿಗೆ ತಕ್ಕಂತೆ untouched

by hand (ಹಸ್ತಸ್ಪರ್ಶವಿಲ್ಲದೆ) Nadiger Method (ನಾಡಿಗೇರ್ ಪದ್ಧತಿಯ ಮೇಲೆ) ಮಾಡಲು ಅನುಕೂಲಿಸಿದ್ದೇನೆ.

ಮೊದಲನೆಯದಾಗಿ ಸಾಹಿತ್ಯಸೇವೆ ಮಾಡುವವರು ಹೇಗಾದರೂ ಕಷ್ಟಪಟ್ಟು ಅಸಮಂಜಸವಾಗಲೀ ಅಸಂಬದ್ಧವಾಗಲೀ "ಸಿರಿಗನ್ನಡಂ ಗೆಲ್ಗೆ, ತಾಯಿನಾಡು, ಸಂಸ್ಕೃತದಲ್ಲಿನ್ನೇನು" ಇತ್ಯಾದಿ ಶಬ್ದಗಳನ್ನು ಉಪಯೋಗಿಸುತ್ತಿರಬೇಕು. ಸಾಹಿತ್ಯಸೇವೆ-ಮಾಡುವವರ ಹೆಸರು ಪ್ರಚಾರವಾಗದಿದ್ದರೆ ಹೇಗೆ? ಅದಕ್ಕೆ ಒಂದು ದಿನಪತ್ರಿಕೆಯನ್ನು ಹೊರಡಿಸಬೇಕು. ಅದರ ಸಂಪಾದಕತ್ವದ ಹೊರೆಯನ್ನು ಸೇವೆಮಾಡುವವರು ಹೊರಬೇಕು ಚೆನ್ನಾಗಿ ಬರೆಯಬಲ್ಲ, ನುರಿತ ೩-೪ ಜನ ಉಪಸಂಪಾದಕರಿಂದ ಕೆಲಸ ತೆಗೆದುಕೊಂಡು ಅಗ್ರಲೇಖನಗಳನ್ನು ಅವರಿಂದಲೇ ಬರೆಯಿಸಬೇಕು. ಉಪಸಂಪಾದಕರು ಬರೆದ ಅಗ್ರಲೇಖನಗಳು ಹೇಗೂ ಸಂಪಾದಕರಿಗೆ ಮುಡಪಿಟ್ಟಂತಾಗಲಿಲ್ಲವೆ? ಸಾಕು ಎಲ್ಲಿಡೆಯಲ್ಲಿಯೂ ಇಂತಹ ದಿನ ಪತ್ರಿಕೆಯ ಸಂಪಾದಕರು ಹೀಗೆ ಬರೆಯುತ್ತಾರೆಂದು ಗೊತ್ತಾಗುವುದು.

ಇದಕ್ಕಿಂತಲೂ ಸುಲಭವಾದದು ಒಂದು ಮಾಸಿಕವನ್ನು (ಮಾಸಿಕವೋ, ವೈಕುಂಠವೋ!) ಹೊರಡಿಸುವುದು. ಸುಪ್ರಸಿದ್ಧ ಜ್ಯೋತಿಷ್ಕರಿಂದ ಭವಿಷ್ಯವನ್ನು ಬರೆಯಿಸಬೇಕು. ಮುಖಪುಟದಲ್ಲಿ, ಚಲನಚಿತ್ರ ತಾರಕೆಯೊಬ್ಬಳ ಚಿತ್ರವನ್ನು ಹಾಕಬೇಕು. ಒಟ್ಟಾರೆ ಒಂದು ಸ್ತ್ರೀಚಿತ್ರವಿದ್ದೇ ತೀರಬೇಕು. ಇದರಲ್ಲೇನಾದರೂ ನ್ಯೂನತೆ ಮಾಡಿ ನೀವು ಪುರುಷರ ಚಿತ್ರವನ್ನಾಗಲಿ, ಪ್ರಕೃತಿ ಸೌಂದರ್ಯದ ಚಿತ್ರವನ್ನಾಗಲೀ ಹಾಕಿದರೆ, ಸರಿ, ಎಲ್ಲರಿಂದ ನಿಮ್ಮ ಪತ್ರಿಕೆಗೆ ಬಹಿಷ್ಕಾರ; ಇಲ್ಲವೇ ಮುಟ್ಟುಗೋಲು! ಸಾಹಿತ್ಯಮ್ಮನ ಆಣೆ! ಹಾಗೆಂದಿಗೂ ಮಾಡಬೇಡಿ. ಪುಟಗಳನ್ನು ತುಂಬುವುದಕ್ಕೆ ಹಿಂದಿ, ತೆಲುಗು, ಮರಾಠಿ ಮತ್ತು ಇಂಗ್ಲಿಷ್ ಭಾಷೆಯಲ್ಲಿನ ಕತೆಗಳನ್ನೂ ಲೇಖನಗಳನ್ನೂ ಅನುವಾದಮಾಡಿ (ಮಾತೃಕೆಯನ್ನು ಕೊಟ್ಟು ಅಥವಾ ಇಲ್ಲ) ಕಳಿಸುವರು. ಅದಕ್ಕೆ ಸಂಪಾದಕೀಯ ಸೂಚನೆಯಲ್ಲಿ—"ಪರಸಾಹಿತ್ಯದಲ್ಲಿನ ಅಮೃತವನ್ನು, ಆ ಭಾಷೆಗಳ ಪರಿಚಯವಿಲ್ಲದ ಕನ್ನಡಿಗರಿಗೆ ಉಣಬಡಿಸಿದ....ರಿಗೆ ನಮ್ಮ ವಂದನೆಗಳು.

ಇದರಂತೆಯೇ ಇವರು ಸಾಹಿತ್ಯಸೇವೆ ಮಾಡುವರೆಂದು ನಂಬಿದ್ದೇವೆ" ಎಂದು ಬರೆಯಬೇಕು

ಮೂರನೆಯದಾಗಿ ಮುನ್ನುಡಿ ಬರೆಯುವುದು ಇದಕ್ಕೆ ಒಂದು Mutual Admiration Society (ಪರಸ್ಪರಾಭಿನಂದನ ಕೂಟ) ಎಂಬ ಸಂಘವನ್ನು ಸ್ಥಾಪಿಸಬೇಕು. ನಾವು ಬರೆದ ಗ್ರಂಥಗಳಿಗೆ ನಮ್ಮ ಸಂಘದ ಸದಸ್ಯರು ಮುನ್ನುಡಿ ಬರೆಯುವುದು ಒಂದು ಕಸಬಾಗಿದೆ ನಾನು ಅನೇಕ ಸಾರಿ ಸಂಶಯಕ್ಕೆ ಒಳಗಾಗಿದ್ದೇನೆ ಗ್ರಂಥಕ್ಕೆ ಮುನ್ನುಡಿಯೋ, ಮುನ್ನುಡಿಗೆ ಗ್ರಂಥವೋ ಎಂಬುದು ತಿಳಿಯುವುದೇ ಕಷ್ಟವಾಗಿದೆ. ಏಕೆಂದರೆ ಮುನ್ನುಡಿಯು ೪೦ ಪುಟಗಳಿದ್ದರೆ ಪುಸ್ತಕವು ೩೨ ಪುಟಗಳಿರುತ್ತದೆ. ಇದರಿಂದ ಮುನ್ನುಡಿ ಬರೆಯಲು ಹಾತೊರೆಯುತ್ತಿದ್ದ ಒಬ್ಬರಿಗೆ ಪುಸ್ತಕವನ್ನು ಬರೆದಿದ್ದಾರೆಂದು ತರ್ಕಿಸಬೇಕಾಗುವುದು. ಇದೊಂದು ತ್ರೈರಾಶಿಯ ಲೆಕ್ಕ

ಇನ್ನೊಂದು ವಿಚಿತ್ರ ಸಂಗತಿಯೇನೆಂದರೆ, ಕನ್ನಡ ಗ್ರಂಥಗಳಿಗೆ ಇಂಗ್ಲೀಷ್‌ನಲ್ಲಿ ಮುನ್ನುಡಿ ಬರೆಯುವುದು. ಏನು ತಮ್ಮ ಇಂಗ್ಲೀಷ್ ವಿದ್ಯೆಯ ಪ್ರತಿಭೆಯನ್ನು ಬೀರುವುದಕ್ಕೆ ಹಾಗೆ ಬರೆಯುತ್ತಾರೋ, ಅಥವಾ ಕನ್ನಡದಲ್ಲಿ ಸಾಕಷ್ಟು ಶಬ್ದಗಳ ಅಭಾವವೆಂದು ಹಾಗೆ ಬರೆಯುತ್ತಾರೋ, ತಿಳಿಯದ ವಿಷಯವಾಗಿದೆ. ಮತ್ತು ಕನ್ನಡ ನುಡಿ ಸೇವೆಯನ್ನು ಇದರಂತೆಯೇ ಮಾಡಬೇಕೆಂದು ಹೇಳುವರು. ಏನು ಅಸಂಬದ್ಧವಿದು? ಅದನ್ನೇ 'ತಿಳಿಗನ್ನಡ'ದಲ್ಲಿ 'ಬಿಳಿಗನ್ನಡ'ದಲ್ಲಿ ಹೇಳಿದರೆ? ಮುನ್ನುಡಿಕಾರರು, ಗ್ರಂಥಕರ್ತರು ಗ್ರಂಥವನ್ನೇಕೆ ಬರೆದರೆಂದು ಹೇಳುವರು. ಗ್ರಂಥಕರ್ತರು ತಾವೇಕೆ ಗ್ರಂಥವನ್ನು ಬರೆದೆವೆಂದು ಹೇಳುವರು. ಇಲ್ಲದಿದ್ದರೆ ನಮಗೆ ಹೇಗೆ ತಿಳಿಯಬೇಕು? ಇರಲಿ. ಯಾವ ಗ್ರಂಥಕ್ಕೆ ಮುನ್ನುಡಿ ಬರೆಯಬೇಕೊ ಅದನ್ನು ಅವಲೋಕಿಸುವ ಅಗತ್ಯವಿಲ್ಲ. ಗ್ರಂಥಕರ್ತನು ಸಾಹಿತ್ಯದ ಹೊಸಲನ್ನು ಆಗತಾನೆ ದಾಟಲು ಅಂಬೆಗಾಲಿಕ್ಕುತ್ತಿದ್ದರೆ "ಗ್ರಂಥಕರ್ತರು ಸಾಹಿತ್ಯದೇವಿಯ ಅಡಿದಾವರೆಗಳಲ್ಲಿ ಅರ್ಪಿಸಿರುವ ಮೊದಲನೆಯ ಕುಸುಮವಿದು. ಮೊದಲಿಗರು ಮಾಡಲೇಬೇಕಾದ ತಪ್ಪುಗಳನ್ನು ಮಾತ್ರ ಮಾಡಿದ್ದಾರೆ. ಇವರ ನೈಜವಾದ ಸರಳ (?) ಶೈಲಿಯೂ, ವಿಚಾರಕ್ರಾಂತಿಯ ಮಿಂಚೂ ಅಲ್ಲಲ್ಲಿ ಝಳಪಿಸಿರುತ್ತದೆ. ಹಂಸಕ್ಷೀರ

ನ್ಯಾಯದಂತೆ ಕಸವನ್ನು ತಳ್ಳಿ ರಸವನ್ನು ಸ್ವೀಕರಿಸಬೇಕು...." ಗ್ರಂಥ ಕರ್ತನು ಹಳಬನಾಗಿ ಅನೇಕ ಗ್ರಂಥಗಳನ್ನು ಬರೆದಿದ್ದರೆ, "ಶ್ರೀಯುತರು ನವಾಗಲೇ ಅನೇಕ 'ತಾಟು' (Plates) ಗಳನ್ನು ಉಣಬಡಿಸಿದ್ದಾರೆ. ಈ ಉದ್ಗ್ರಂಥವು ಸಾಹಿತ್ಯದಲ್ಲಿನ ಅನೇಕ ಕುಂದುಕೊರತೆಗಳನ್ನು ದೂರ ಮಾಡಿರುತ್ತದೆ. ಶ್ರೀಯುತರ ಸಾಹಿತ್ಯದ ಅಡಿಗೆಯ ರುಚಿಯನ್ನುಂಡು ತೇಗಿರುವ ಕನ್ನಡಿಗರಿಗೆ ಹೆಚ್ಚಿಗೆ ಹೇಳುವುದೇನಿದೆ?" ಇಂತಹ ಮಾದರಿಯ ಮುನ್ನುಡಿಗಳನ್ನು ಅಚ್ಚುಹಾಕಿಸಿಟ್ಟುಕೊಂಡು, ಗ್ರಂಥಕರ್ತರು ಮುನ್ನುಡಿ ಬೇಕೆಂದು ಕೇಳಿಕೊಂಡ ಕೂಡಲೇ ವಿ ಪಿ. ಮೂಲಕ ಕಳಿಸಬೇಕು, ಮುನ್ನುಡಿ ಬರೆಯುವವರು "ಕೃಷ್ಣರಾಯರು, ಮುನ್ನುಡಿಕಾರರು. ೩೮ ಗ್ರಂಥಗಳಿಗೆ ಮುನ್ನುಡಿ ಬರೆದಿದ್ದಾರೆ, ತ್ವರೆಮಾಡಿರಿ" ಎಂತ ಪತ್ರಿಕೆಗಳಲ್ಲಿ ಜಾಹೀರಾತು ಕೊಡಬಹುದು, ಮತ್ತು ವಕೀಲರು, ಹೋಟೇಲಿನವರು ಬೋರ್ಡ್ ಹಾಕಿಕೊಳ್ಳುವಂತೆ "ಕೃಷ್ಣರಾಯರು ಶ್ರೇಷ್ಠವರ್ಗದ ಮುನ್ನುಡಿಕಾರರು' ಎಂತ ಬೋರ್ಡ್ ಸಹ ಹಾಕಿಕೊಳ್ಳಬಹುದು

ಬರಿಯ ಸಾಹಿತ್ಯಸೇವೆಯಿಂದ ಹೊಟ್ಟೆ ತುಂಬುವುದಿಲ್ಲ. ತಲೆ ತುಂಬುತ್ತದೆ. ಆಂಗ್ಲಕವಿಯೊಬ್ಬನು ಹೇಳಿವಂತೆ Philosophy bakes no bread ಆಗಿರುತ್ತದೆ. ಆದುದರಿಂದ ಹೇಗಾದರೂ ಪ್ರಯತ್ನಮಾಡಿ ಟೆಕ್ಸ್ಟ್‌ಬುಕ್ ಕಮಿಟಿ (ಪಠ್ಯಪುಸ್ತಕ ನಿಯಮಿಸುವ ಸಂಸ್ಥೆಯಲ್ಲಿ) ನಮ್ಮ Mutual Admiration Society ಯವರು ಸ್ಥಳಗಳನ್ನು ದೊರಕಿಸಿಕೊಳ್ಳಬೇಕು. ನಮ್ಮ ಸಂಘದ ಸದಸ್ಯರು ಬರೆದ ಪುಸ್ತಕಗಳಿಗೆ ನಾವು ಪ್ರೋತ್ಸಾಹ ಕೊಡುವುದು ನಾವು ಬರೆದುದಕ್ಕೆ ಅವರು ಪ್ರೋತ್ಸಾಹ ಕೊಡುವುದು ಹೀಗಾದರೆ ನಮ್ಮ ಪುಸ್ತಕಗಳು ಪಠ್ಯಪುಸ್ತಕಗಳಾಗಿ ನೇಮಕವಾಗಿ ದುಡ್ಡು ಹೇರಳವಾಗಿ ಬರುವುದು. ಸುಮ್ಮನೆ ಗ್ರಂಥಗಳನ್ನು ಬರೆದರೆ ಯಾರೂ ತೆಗೆದುಕೊಳ್ಳುವುದಿಲ್ಲ. ಪಠ್ಯಪುಸ್ತಕವಾಗಿ ನಿಯಮಿಸಲ್ಪಟ್ಟರೆ ಮಾತ್ರ ನಮ್ಮ ಬೇಳೆ ಬೇಯುತ್ತದೆ.

ಇನ್ನು ಸಾಹಿತ್ಯಸೇವೆ ಮಾಡಲು ಅಡಿಯಿಟ್ಟಕೂಡಲೇ ಎಲ್ಲೆಡೆಯಿಂದಲೂ ಕಟುತರವಾದ ಟೀಕೆ, ವಿಮರ್ಶೆಗಳ ಸುರಿಮಳೆಯಾಗುತ್ತದೆ. ಆದಕ್ಕೆ ನಮ್ಮ ನಿಜವಾದ ಹೆಸರನ್ನು ತೆರೆಯ ಮರೆಯಲ್ಲಿರಿಸಿ "ಮೂಲೆಯ

ಮುಟ್ಠಾಳ'' ''ಸದ್ದಿಲ್ಲದೆ ಗುದ್ದಿದವ'' ''ಅನಾಥ ಪ್ರೇತ'' ''ಓಂ'' ಇತ್ಯಾದಿ 'ಅನಾಮಕ' ಹೆಸರುಗಳನ್ನಿಟ್ಟುಕೊಂಡು ಬರೆಯುವುದು. ಬರೆದ ಲೇಖನಗಳಿಗೆ ಟೀಕೆ, ವಿಮರ್ಶೆಗಳು ಬರುವವೆಂದು ತಿಳಿಯೋಣ. ಆದರೆ ನಮ್ಮ ಹೆಸರು ತೆರೆಯ ಮುಸುಕಿನಲ್ಲಿರುವುದರಿಂದ, ಅವು ಯಾರಿಂದ ಬರೆಯಲ್ಪಟ್ಟವೆಯೆಂದು ಗೊತ್ತಾಗದೆ ಸುಮ್ಮನಾಗುವರು. ಇದಕ್ಕಿಂತಲೂ, ಕೆಲವರು ತಾವು ಬರೆದು ತಮ್ಮ ಸ್ತ್ರೀ ಅನುಬಂಧಿಗಳ ಹೆಸರನ್ನು ಕೊಡುವರು. ಇದರಲ್ಲಿಯೂ ಗುಣವುಂಟು. ''ಏನೋ ಹೆಂಗಸರು ಬರೆದಿದ್ದಾರೆ. ಹೋಗಲಿ ಬಿಡಿ, ಅವರು ಅಷ್ಟು ಬರೆಯುವುದೇ ಹೆಚ್ಚು'' ಎಂತ ಸುಮ್ಮನಾಗುವರು. ಕೆಲವರು ಹೆಂಗಸರ ಮೇಲೆ ಏನು ಕೈಮಾಡುವುದು. ಅವರು ಗಂಡಸರಾಗಿದ್ದರೆ....'' ಎಂದು ಹಲ್ಲು ಕಡಿಯುತ್ತಾ ಅವುಗಳನ್ನು ಬಾಯಲ್ಲಿ ಮತ್ತೆ ಸೇರಿಸಿಕೊಳ್ಳುವರು. ಇವರು ಈಗಿನ ಯುದ್ಧಗಳಂತೆ ಹೆಂಗಸರ ಮೇಲೂ ಹುಡುಗರ ಮೇಲೂ ಕೈಮಾಡುವವರಲ್ಲ. ಧರ್ಮಯುದ್ಧಮಾಡತಕ್ಕವರು.

ಕವನದ ವಿಚಾರ. Heights reached by great men is not by a sudden flight ಎಂತ ಲಾಂಗ್‌ಫೇಲೋ ಕವಿಯು ಹೇಳಿದ್ದಾನೆ. ಆದುದರಿಂದ ಮೊದಲು ಸಣ್ಣಸಣ್ಣ ಲೇಖನಗಳನ್ನು ಕತೆಗಳನ್ನು ಬರೆದು ಆಮೇಲೆ ಕವನಗಳಿಗೆ ಕೈ ಹಚ್ಚಬೇಕು. ಉದಾಹರಣಾರ್ಥವಾಗಿ, ಮೋಟಾರ ಡ್ರೈವರನು ಒಮ್ಮೆಲೇ ಜನರ ಮೇಲೆ ಮೋಟಾರು ಬಿಡುವುದಿಲ್ಲ. ಆರಂಭದಲ್ಲಿ ನಾಯಿಕುನ್ನಿ, ಮೇಕೆಯ ಮರಿ, ಮುದುಕಿ ಇವುಗಳ ಮೇಲೆ ಬಿಡುತ್ತಾನೆ. ಕೊನೆಗೆ ದೊಡ್ಡವರ ಮೇಲೂ ಗುಂಪುಗಳ ಮೇಲೂ ಬಿಡುವನು. ಹೀಗೆಯೇ ಅಭ್ಯಾಸ ಮಾಡಿದರೆ ಸಾಧಿಸಲಿಕ್ಕಾಗುವುದಿಲ್ಲವೇ? ಕವನಗಳಿಂದ ಕವಿಯಾಗುವನೋ, ಕವಿಯಿಂದ ಕವನಗಳಾಳುವವೋ? ಇದು ಬೀಜವೃಕ್ಷನ್ಯಾಯದಂತೆ ಇದೆ. ಅದರ ಚರ್ಚೆ ಬೇಡ.

ಪೂರ್ವದಲ್ಲಿ ನಮ್ಮ ಹಿರಿಯರು ಬಹು ವರ್ಷಗಳ ತನಕ ಬದುಕುತ್ತಿದ್ದರು. ಈಗಿನವರಿಗೆ ಬಹು ಅವಸರ. ವಾರ್ಧಿಕ್ಯ ಬರುವಷ್ಟರಲ್ಲಿ ಎಷ್ಟೋ ಜನ್ಮಗಳನ್ನು ಎತ್ತಿರುತ್ತಾರೆ. ಇಂದಿನವರ ಆಯುಸ್ಸು ಕೇವಲ ೨೨ ವರ್ಷ. ಹೀಗಿರುವಾಗ ಸಹಸ್ರಾರು ಪದ್ಯಗಳಾಗುವ ಪುರಾಣಗಳನ್ನಾಗಲಿ ಕತೆಗಳ

ನ್ನಾಗಲೀ ಬರೆಯುವದು ಸಾಧ್ಯವೆ? ಆ ವಿಷಯುಗಳು ಈಗಿನವರಿಗೆ ಬೇಸರವಾಗಿರುತ್ತವೆ. ಮೊದಲು ಛಂದೋಬದ್ಧವಾದ ಕವನಗಳನ್ನು ರಚಿಸಬೇಕಾಗಿದ್ದಿತು; ವಿಷಯುಗಳನ್ನು ಹುಡುಕಬೇಕಾಗಿದ್ದಿತು ಈಗ ಆ ತಂಟೆ ತಕರಾರುಗಳಿಲ್ಲ ಯಾವ ವಿಷಯದ ಮೇಲಾದರೂ ಯಾವ ಪದಾರ್ಥದ ಮೇಲಾದರೂ ಕವನ ಮಾಡಬಹುದು. ಮಸಿಕುಡಿಕೆ, ಪರಕೆ, ತಂಬಿಗೆ, ಚಿಗಟೆ, ನಾಯಿ, ಇತ್ಯಾದಿ. ಮೊನ್ನೆ ನನ್ನ ಸ್ನೇಹಿತ ಕರ್ಣಾಟಕ ಕವಿಸಾಮ್ರಾಟ್....ರು ಬರೆದ "ಎಮ್ಮೆಯ ಸಗಣಿ" "ಜೇಡಿವ.ಣ್ಣು" ಇವುಗಳ ಮೇಲಿನ ಕವನದ ಸಾರವು ನನ್ನ ತಲೆಗೆ ಇನ್ನೂ ಅಂಟಿಕೊಂಡಿದೆ ಕನ್ನಡಿಗರು ನನ್ನ ಪದ್ಧತಿಯ ಮೇಲೆ ಸಾಹಿತ್ಯ ಸೇವೆ ಮಾಡಿದರೆ ಈ ಲೇಖನದ ಸಾರ್ಥಕತೆಯಾದಂತಾಗುವುದೆಂಬ ಭರವಸೆಯಿಂದ ಕನ್ನಡಿಗರ ಹೃದಯ ಕಮಲದ ಭೃಂಗವಾಗಿ ಹಾರಾಡಿಕೊಂಡಿರುವ, ನಿಮ್ಮ....

---

# ಬಸ್.....:.....?

ಪ್ರಗತಿಗಾಮಿಯಾದ ವಿಶ್ವದಲ್ಲಿ ವಿಜ್ಞಾನವು ತನ್ನ ಹೆಚ್ಚುಗಾರಿಕೆಯಿಂದ ಎಷ್ಟು ಮುಂದುವರಿದಿದೆ ಎಂಬುದು ಕಲ್ಪನಾತೀತವಾಗಿದೆ ರಸ್ತೆಯ ಮೇಲೆ ಓಡಾಡುವ, ನೀರಿನಮೇಲೆ ಹೋಗುವ, ವಿಹಂಗಮಗಳಂತೆ ಅಂತರಿಕ್ಷದಲ್ಲಿ ಹಾರಾಡುವ ಮೋಟಾರುಗಳಿವೆ. ಆದರೆ ಇದರಲ್ಲಿ ಬಹುಮುಖ್ಯವಾದುದು ಯಾವುದೆಂದರೆ ಜನರ ಮೇಲೆ ಓಡಾಡುವುದು. ಈ ಬಗ್ಗೆ ನನ್ನ ಅನುಭವವನ್ನು ಇಲ್ಲಿ ಸ್ವಲ್ಪ ಬಿಚ್ಚಬೇಕೆಂದಿದ್ದೇನೆ.

ನಮ್ಮಜ್ಜನ ಊರು ಒಂದು ಹಳ್ಳಿ. ಎಲ್ಲರ ಅಜ್ಜಂದಿರ ಊರುಗಳು ಹಳ್ಳಿಗಳೇಯೆಂದು ನನ್ನ ಭಾವನೆ. ಇರಲಿ. (ವಿಷಯಾಂತರ, ಕ್ಷಮಿಸಿ.) ನಮ್ಮ ಅಜ್ಜನನ್ನು ನೋಡುವ ಹೆಬ್ಬಕೆ ನನ್ನಲ್ಲಿ ಮೂಡಲು, ಅಲ್ಲಿಗೆ ಹೊರಟೆ. ಒಂದು ಸಣ್ಣ ರೈಲ್ವೇ ಸ್ಟೇಷನ್. ಅಲ್ಲಿ ಪೋರ್ಟರ್, ಅಸಿಸ್ಟೆಂಟ್ ಸ್ಟೇಷನ್ ಮಾಸ್ಟರ್, ಗೂಡ್ಸ್‌ಮಾಸ್ಟರ್, ಇವರೆಲ್ಲರ ಕೆಲಸಮಾಡುವ ಸ್ಟೇಷನ್ ಮಾಸ್ಟರ್ ಒಬ್ಬರು, ನಮ್ಮ ಅಜ್ಜನೂರಿಗೆ ಹೋಗುವ ಮೋಟಾರು ಕಾಲು ಗಂಟೆಯಲ್ಲಿಯೇ ಹೊರಡುವುದೆಂದು ತಿಳಿಸಿದರು ಸ್ಟೇಷನ್ ಮುಂಭಾಗದಲ್ಲಿ, ಹಳೆಯ ಮೋಟಾರು ಒಂದು ನಿಂತಿದ್ದಿತು; "ಎ. ಎಸ್. ಟಿ. ಪಿ. ಎನ್. ಎಂ. ಎಸ್." ಅಂತ ಬೋರ್ಡು ಇದ್ದಿತು. ಈ ರೀತಿ ಉದ್ದನೀಯ ಸಂಕ್ಷೇಪದ ಅಕ್ಷರಗಳು ಕೇವಲ ಮೋಟಾರು ಸರ್ವಿಸಿನವರಿಗೆ ತಿಳಿಯಲೆಂದೇ ಹೊರತು ಪ್ರವಾಸಿಕರಿಗಾಗಲೀ ಇತರರಿಗಾಗಲೀ ಅಲ್ಲ. ಆದರೆ ಕೊನೆಯ ಎರಡು ಅಕ್ಷರಗಳಾದ "ಎಂ. ಎಸ್." ಅಂದರೆ "ಮೋಟಾರು ಸರ್ವಿಸ್" ಅಂತ ಗ್ರಹಿಸಿಕೊಳ್ಳಲು ಅಧಿಕಾರವಿದೆ ಆ ಅಧಿಕಾರವನ್ನು ಉಪಯೋಗಿಸಿಕೊಳ್ಳದೆ ನಾನೇನೂ ಬಿಡಲಿಲ್ಲ. ಮೋಟಾರು ನೋಡಿದಾಗ್ಗೆ ನನಗೆ ದಿಗಿಲಾಯಿತು. ನಾನು ಹೋಗಬೇಕಾಗಿದ್ದ ಒಂದು ನೂರು

ಇಪ್ಪತ್ತು ಮೈಲು ಇದು ಹೋಗಬಲ್ಲುದೆ? ಎಂಬ ಸಂಶಯವು ಬಾಧಿಸ ಹತ್ತಿತು. ನಮ್ಮಜ್ಜನ ಊರಿಗೆ ಹೋಗಲೇಬೇಕಾಗಿದ್ದದರಿಂದ ಅನಿವಾರ್ಯ ಪಕ್ಷದಿಂದ ಮೋಟಾರು ಹತ್ತಲು ಹೋದೆನು. ಒಳಗೆ ಕುಳಿತುಕೊಳ್ಳ ಬೇಕೆಂದು, ಸವಿನಯವಾಗಿ ಕಂಡಕ್ಟರನು ತಿಳಿಸಿದನು. ಆತನು ಹಾಕಿದ ಬಟ್ಟೆಗಳು ಮಯಣದ ಗಮುಟಿನ ಬಟ್ಟೆಗಳಂತೆ ಇದ್ದುವು. ಹೊಸದರಲ್ಲಿ ಅವು ಯಾವ ಬಣ್ಣದ್ದೆಂಬುದು, ಆತನಿಂದಲೇ ತಿಳಿಯಬೇಕಾಗಿದ್ದ ಅಂಶ ವಾಗಿದ್ದರಿಂದ ಆ ಹವ್ಯಾಸವನ್ನು ಬದಿಗೊತ್ತಿದೆನು. ಕಾಲುಗಂಟೆಯಲ್ಲಿಯೇ ನಮ್ಮ ಮೋಟಾರು ಹೊರಡುವುದೆಂದು ಆತನು ತಿಳಿಸಿದ್ದರಿಂದ ಉಪಾ ಹಾರದ ಗೊಡವೆಗೆ ಹೋಗಲಿಲ್ಲ. ಕಂಡಕ್ಟರನೂ ಆತನ ಸ್ನೇಹಿತನೂ, ನಾನು ಪ್ರವಾಸಮಾಡಬೇಕಾಗಿದ್ದ ಮೋಟಾರಿನ ಗುಣಗಾನ ನಡೆಯಿಸಿ ದ್ದರು. ಅದು ಗಂಟೆಗೆ ಐವತ್ತು ಮೈಲಿ ಓಡುವದೆಂದೂ ಅದು ಜನ್ಮತಾಳಿ ದಂದಿನಿಂದ ಯಾವ ಅಪಘಾತಕ್ಕೂ ಈಡಾಗದೆ ಗಡಿಯಾರದಂತೆ ನಡೆ ಯುತ್ತಾ ಇದೆಯೆಂದೂ ಮಾತಾಡುತ್ತಿದ್ದರು. ನನ್ನ ಸಂಶಯವನ್ನು ತಿಳಿದು ಕೊಂಡು ಹೀಗೆ ಮಾತಿಗೆ ಆರಂಭಿಸಿದರೇನೋ ಅಂತ ಇಂದಿಗೂ ನನಗೆ ಶಂಕೆ.

ನಾನು ಕುಳಿತೊಡನೆ ಗಾಡಿಯಲ್ಲಿದ್ದ ಕಂಡಕ್ಟರನೂ ಅವನ ಸ್ನೇಹಿ ತನೂ ಕೆಳಗಿಳಿದು ಎಲ್ಲಿಗೋ ಹೋದರು ಎಷ್ಟೋ ಕಾಲುಗಂಟೆಗಳು ಕಳೆದವು. ಹಳ್ಳಿಯ ಇಬ್ಬರು ಪ್ರವಾಸಿಕರು ಗಾಡಿಯಲ್ಲಿ ಕುಳಿತರು. ಅವರು ತಮ್ಮ ಸಂಸಾರದ ಮಾತುಕತೆಗಳನ್ನಾಡಿ ಬೇಸತ್ತು, ಆಕಳಿಸಿ, ನಿದ್ದೆಹೋದರು. ನಾನು ಪಂಚಾಕ್ಷರಿ ಜಪಿಸುತ್ತ ಹಾಗೆಯೇ ಕುಳಿತಿದ್ದೆ. ಅಂತೂ ಡ್ರೈವರನೂ ಕಂಡಕ್ಟರನೂ ಎಷ್ಟೋ ಹೊತ್ತಾದಮೇಲೆ ಬಂದರು. ಅವರು ಬಂದಕೂಡಲೇ ಬಸ್ಸು ಹೊರಟಿತು.

ಗಾಡಿಯು ವೇಗವಾಗಿ ಹೊರಟಿತು. ಹಿಂದಿನ ದಿವಸ ರಾತ್ರಿಯಲ್ಲಿ ಮಳೆಯಾಗಿತ್ತು. ಜನರು ರಸ್ತೆಯಲ್ಲಿದ್ದಾಗ ಡ್ರೈವರನು ಅವರಿಗೆ ಸಿಡಿಯು ವಂತೆ "ಜರ್" ಅಂತ ಗಾಲಿಗಳನ್ನು ನೀರಿನ ಮೇಲೆ ಓಡಿಸಿ ಅವರಿಂದ ಬೈಸಿಕೊಳ್ಳುತ್ತಿದ್ದನು. ಕಂಡಕ್ಟರನು ಹೊಟ್ಟೆ ಹಿಡಿದುಕೊಂಡು ನಗುತ್ತಿ ದ್ದನು. ಮೊದಲಿನ ಇಪ್ಪತ್ತು ಮೈಲು ಗಾಡಿಯು ಬಹು ಸರಾಗವಾಗಿ ಹೋಯಿತು. ಆಮೇಲೆ ಒಂದು ಹಳ್ಳಿಯು ಬಂದಿತು. ಅಲ್ಲಿಯ ಪೋಲೀಸಿ

ನವರು ಅಮಲ್ದಾರ್ರು ಬರುತ್ತಾರೆಂದೂ ಗಾಡಿಯನ್ನು ಹತ್ತು ನಿಮಿಷ ನಿಲ್ಲಿಸ ಬೇಕೆಂದೂ ಹೇಳಿದನು. ಹತ್ತು ನಿಮಿಷವು ಮನುಷ್ಯರ ಲೆಕ್ಕದ್ದಲ್ಲ. ಬ್ರಹ್ಮನ ಹತ್ತು ನಿಮಿಷ. ನಮಗೆಲ್ಲ ಬಹು ಬೇಜಾರಾಯಿತು ಕಡೆಗೆ ಪೋಲೀಸಿ ನವನು ಅಮಲ್ದಾರ್ರು ಮಾರನೆಯ ದಿವಸ ಹೊರಡುವರೆಂದೂ ಗಾಡಿಯು ಹೋಗಬಹುದೆಂದೂ ಅನುಜ್ಞೆಯನ್ನಿತ್ತನು.

ಮಧ್ಯಾಹ್ನ ಹನ್ನೆರಡು ಗಂಟೆಯಾಗಿರಬಹುದು. ಒಂದು ಸಾಧಾರಣ ಊರು. ಅಲ್ಲಿ ನಮ್ಮ ಮೋಟಾರು ನಿಂತಿತು. ಡ್ರೈವರನು ಕೆಳಗಿಳಿದು ಹೋದನು ಸುಮಾರು ಮುಕ್ಕಾಲು ಗಂಟೆಯಾದರೂ ಆತನು ಬರಲಿಲ್ಲ. ನಾವೆಲ್ಲರೂ ಆತನು ಎಲ್ಲಿಗೆ ಹೋದನೆಂದು ಕೇಳಿದೆವು ಡ್ರೈವರನು ಬಂದಾಗ ಅವನ ಒಂದುವರೆ ಅಂಗುಲ ಉದ್ದ ಇದ್ದ ಗಡ್ಡಗಳು ಮಾಯು ವಾಗಿ ಹುಡುಗನ ಹಾಗೆ ಕಾಣಿಸುತ್ತಿದ್ದಾನೆ ಅವನು ಹಾಕಿದ್ದ ಒಟ್ಟೆಗಳೂ ಬೇರೆಯಾಗಿವೆ. ಹಣೆಯ ಮೇಲೆ ಗಂಧದ ಬೊಟ್ಟು; ಎಲೆ ಅಡಿಕೆ ಬೇರೆ, ಮೆಲ್ಲುತ್ತಿದ್ದಾನೆ. ಬೆಳಗಿನ ಉಪಾಹಾರವಿಲ್ಲದೆ ನಮ್ಮ ಮೋರೆಗಳು ಬಿಸಿಲಿ ನಲ್ಲಿ ಬಿಸಾಡಿದ ಮಲ್ಲಿಗೆ ಹುವ್ವಾಗಿದ್ದವು. ಡ್ರೈವರನನ್ನು ನೋಡಿದಾಗ ನಮ್ಮ ಮನಸ್ಸಿನ (ಹೊಟ್ಟೆಯ?) ಪರಿಸ್ಥಿತಿ ಹೇಗಿರಬಹುದು? ರೈಟ್ ಅಂತ ಕಂಡಕ್ಟರನು ಕೂಗಿಕೊಂಡನು ಬಸ್ ಹೊರಟಿತು.

ಈಗಾಗಲೇ ಬಸ್ಸಿನಲ್ಲಿ ಸ್ಥಳವಿಲ್ಲ ಜನಗಳನ್ನು ಹತ್ತಿಯ ಮೂಟೆ ಗಳಂತೆ ಒತ್ತಿ ಒತ್ತಿ ತುಂಬುತ್ತಿದ್ದರು ನಾನು ಗರ್ಭವತಿ ಸ್ತ್ರೀಯಲ್ಲವೆಂದು ಎಷ್ಟೋ ಸಮಾಧಾನವಾಯಿತು. ಮಡ್‌ಗಾರ್ಡಿನ ಮೇಲೆ, ಪುಟ್ ಬೋರ್ಡಿನ ಮೇಲೆ, ಅಂತೂ ಎಲ್ಲೆಲ್ಲಿ ಸ್ಥಳವಿದೆಯೋ ಅಲ್ಲೆಲ್ಲಾ ಜನರು ತುಂಬಿದರು. ಭಾರತೀಯರಾದ ನಮಗೆ ಇದ್ದುದರಲ್ಲಿ ಸವರಿಸಿಕೊಳ್ಳುವುದು ಒಂದು ನೂರಐವತ್ತು ವರ್ಷಗಳ ಬ್ರಿಟಿಷರ ಅವ್ಯಾಹತವಾದ ಆಳ್ವಿಕೆಯಿಂದ ಅಭ್ಯಾಸವಾಗಿದೆ. ಹೇಗೆಂದರೆ ಜಗತ್ತಿನ ಎಲ್ಲ ನಾಗರಿಕ ರಾಷ್ಟ್ರಗಳವರಿ ಗಿಂತ ನಮ್ಮ ಉತ್ಪನ್ನವು ಬಹಳ ಕಡಿಮೆಯಿದೆ ಹತ್ತು ಹನ್ನೆರಡು ಜನ ರಿರುವ ಸಂಸಾರದಲ್ಲಿ ಬಹು ಸ್ವಲ್ಪ ಉತ್ಪತ್ತಿಯಿಂದಲೇ ಜೀವನ ಮಾಡು ತ್ತಾರೆ. ಸ್ಥಳವಿಲ್ಲದ ರೈಲುಗಾಡಿಗಳಲ್ಲಿ ಕೂಡುತ್ತಾರೆ. ಹೆಚ್ಚೇನು, ತಾಳ್ಮೆ ಯಿಂದ ಎಲ್ಲಿಯಾದರೂ ಹೇಗಾದರೂ ಸವರಿಸಿಕೊಳ್ಳುತ್ತಾರೆ.

ಒಂದೊಂದು ಸಾರಿ ಗಾಡಿಯು ಹೋಗುವಾಗ್ಗೆ ರಸ್ತೆಯಲ್ಲಿ ಯಾರಾದರೂ ಕೈ ಎತ್ತಿದಕೂಡಲೇ "ಗಕ್ಕನೆ" ನಿಲ್ಲುತ್ತಿತ್ತು. ಆಗ್ಗೆ ಎದುರು ಸೀಟಿನಲ್ಲಿ ಕುಳಿತಿದ್ದವರ ಯೋಗಕ್ಷೇಮವನ್ನು ವಿಚಾರಿಸುತ್ತಿದ್ದೆವು. ಒಂದು ಸಾರಿ ಪಕ್ಕದ ಒಂದು ಹೊಲದ ಆಚೆಯ ಮೇರೆಯ ಕಡೆಯಿಂದ ಯಾವನೋ ಒಬ್ಬನು ಓಡಿಬರುತ್ತಿದ್ದನು. ಅವನು ಓಡಿ ಬರುವುದನ್ನು ನೋಡಿದ ಕಂಡಕ್ಟರನು "Hold on" ಎಂತ ಕಿರುಚಿದ. ಅರ್ಧಫರ್ಲಾಂಗ್ ದೂರ ಹೋದಮೇಲೆ ಮೋಟಾರು ನಿಂತಿತು. ಆದರೆ ಓಡಿಬರುತ್ತಿದ್ದ ಮನುಷ್ಯನು ತನ್ನ ಹೊಲದಲ್ಲಿ ದನಗಳು ಮೇಯುತ್ತಿದ್ದರಿಂದ ಓಡಿಸುವುದಕ್ಕೆ ಹೋಗುತ್ತಿದ್ದನಂತೆ! ನಮಗೆಲ್ಲಾ ಹಿಡಿಸಲಾರದಷ್ಟು ನಗೆ ಬಂದಿತು.

ನಮ್ಮಜ್ಜನ ಊರು ಇನ್ನೂ ಹದಿನೈದು ಮೈಲು ಮಾತ್ರವಿತ್ತು. ಎಂಟನೆ ಮೈಲು ಬರುವಷ್ಟರಲ್ಲಿ ಒಂದು ದೊಡ್ಡಹಳ್ಳಿಯು ಬಂದಿತು. ಅಲ್ಲಿಯ ಏಜಂಟನಿಗೂ ನಮ್ಮ ಕಂಡಕ್ಟರನಿಗೂ ಬಹಳ ಸ್ನೇಹವಿತ್ತೆಂದು ಗೊತ್ತಾಯಿತು. ಹೇಗೆಂದರೆ, ಮೊದಲು ಇಬ್ಬರೂ ಹೊಡೆದಾಡಿದರು. ಅವನ ಮತ್ತು ಇವನ ಬಹಳ ಹತ್ತಿರದ ಅನುಬಂಧಿಗಳನ್ನು ಇಬ್ಬರೂ ಬಯ್ಯುತ್ತಿದ್ದರು. ಮಿತ್ರತ್ವ ಹೆಚ್ಚಾದ ಹಾಗೆಲ್ಲಾ ಹೆಚ್ಚು ಬಯ್ಯಬೇಕು. ಮತ್ತು ಸ್ನೇಹದ ಪರಮಾವಧಿಯೆನ್ನುವುದಕ್ಕೆ ಇಬ್ಬರು ಒಂದೇ ಬೀಡಿಯನ್ನು ಸೇದುವರು. ಮೋಟಾರು ಸರ್ವೀಸಿನ ಯಜಮಾನನ ಮಗನು ಬರುವನೆಂದು ಯಾರೋ ಹೇಳಿದ್ದರಿಂದ ಬಸ್ಸನ್ನು ಅರ್ಧಗಂಟೆ ನಿಲ್ಲಿಸಲೇಬೇಕಾಯಿತು. ಆ ಹುಡುಗನು ಬಿಳಿ ಹರಳಿನ ಬೆಂಡವೋಲೇ ಹಾಕಿಕೊಂಡಿದ್ದನು. ಹತ್ತು ಬೆರಳುಗಳಿಂದ ಹನ್ನೆರಡು ಉಂಗುರಗಳು. ತಲೆಯ ಮೇಲೆ ಕ್ರಾಪೂ ಇತ್ತಲ್ಲದೆ, ಒಂದು ತೆಂಗಿನ ಜುಟ್ಟಿನ ಹಾಗೆ ಸಣ್ಣ ಜುಟ್ಟೂ ಇದ್ದಿತು. ಸನಾತನ ಧರ್ಮಕ್ಕೂ, ಈಗಿನ ನಾಗರಿಕತೆಗೂ ರಾಜೀಮಾಡಿದ ಹಾಗೆ ಅಥವಾ ಇಂಗ್ಲೀಷಿನಲ್ಲಿ ಹೇಳುವಹಾಗೆ "Where west meets east" ಅವನು ಡ್ರೈವಿಂಗ್ ಅಭ್ಯಸಿಸುವುದಕ್ಕೆ ಚಕ್ರವನ್ನು ಹಿಡಿದನು. ಡ್ರೈವರನು ಅವನ ಬಲಭಾಗದಲ್ಲಿ ಕುಳಿತನು. ಮನೆಯಲ್ಲಿ ನಾನು ಹೇಳದೇ ಬಂದುದೂ ಹೆಚ್ಚು ಹಣಕ್ಕೆ ವಿಮಾಮಾಡಿಸದೆ

ಇದ್ದುದೂ ತಪ್ಪೆಂದು ಗೊತ್ತಾಯಿತು. ನನ್ನ ಚರಮ ಶ್ಲೋಕವನ್ನು ಹೇಳಿಕೊಂಡೆನು.

ಹಾವಿನ ಹಾಗೆ ಬಸ್ ಹೊರಟಿತು. ಅಂತೂ ನಮ್ಮಜ್ಜನ ಊರು ಬಂದಿತು. ಊರು ಮುಂದೆ ಶಾಲೆಯನ್ನು ಆಗಲೇ ಬಿಟ್ಟಿರಬೇಕೆ? ಹುಡು ಗರು ಗುಂಪುಕಟ್ಟಿಕೊಂಡು ಬರುತ್ತಿದ್ದರು. ಕೆಲವರು "ಗುಡ್‌ಮಾರ್ನಿಂಗ್ ಸಾರ್" ಅಂತ ಕೂಗುತ್ತಿದ್ದರು. ಕೆಲವರು ಮೋಟಾರು ಕೂಗುವುದನ್ನು ಅನುಕರಿಸುತ್ತ "ಊ" ಎನ್ನುತ್ತಿದ್ದರು. ಹೊರಟಿತು ಬಸ್. ಮುಂದೆ ರಸ್ತೆಯಲ್ಲಿ ಕೆಲವರು ಹುಡುಗರು ಆಡುತ್ತಿದ್ದರು. ಗಾಡಿಯನ್ನು ನಿಲ್ಲಿಸಲು ಡ್ರೈವರನೂ ಯಜಮಾನನ ಮಗನೂ ಪ್ರಯತ್ನಿಸಿದರು. ಆದರೂ ಗಾಲಿ ಗಳು ಉರುಳಿದವು. ಒಂದು ಹುಡುಗನ ಹೊಟ್ಟೆಯಮೇಲೆ ಬಸ್ ಹರಿ ದಿತ್ತು. ಗಾಡಿಯಲ್ಲಿನ ಹೆಂಗಸರು ಚಿಟ್ಟನೆ ಚೀರಿದರು. ಗಂಡಸರು ಅಯ್ಯೋ ಎಂದರು. ಏನಂದರೇನು. ಹುಡುಗನ ಪ್ರಾಣವು ಹಾರಿದ್ದಿತು. ಎಲ್ಲವೂ ಮುಗಿದಮೇಲೆ ಬರುವಂತೆ ಪೋಲೀಸಿನವರು ಬಂದರು. "ಸಾಕ್ಷಿ ಗಾಗಿ" ಎಂತ ನಮ್ಮ ವಿಳಾಸವನ್ನು ಬರೆದುಕೊಂಡರು.

x x x x

ಕೆಲದಿನಗಳಾದಮೇಲೆ ಊರಿಗೆ ಬಂದೆನು. ಸಾಕ್ಷಿಗಾಗಿ ನಾನೇನೂ ಹೋಗಲಿಲ್ಲ. ಏಕಂದರೆ ಇಬ್ಬರು ಹಳ್ಳಿಯುವರನ್ನು ಮಾತ್ರ ಸಾಕ್ಷಿ ಬರೆಸಿದ್ದ ರಂತೆ. ಕೆಳಕೋರ್ಟಿನಲ್ಲಿ ಡ್ರೈವರನಿಗೆ ಹತ್ತುರೂಪಾಯಿ, ಕಂಡಕ್ಟರನಿಗೆ ಐದು ರೂಪಾಯಿ ಜುಲ್ಮಾನೆ ವಿಧಿಸಲಾಗಿತ್ತಂತೆ. ಆದರೆ, ಅಪೀಲಿನಲ್ಲಿ ಅಪರಾಧಿಗಳ ಕಡೆ ವಕೀಲರು ವಾದಮಾಡುತ್ತಾ, "ನನ್ನ ಕಕ್ಷಿಗಾರನು, ಬಹಳ ನಿಧಾನವಾಗಿ ಬರುತ್ತಿದ್ದ. ಜನಸಂದಣಿಯು ಹೆಚ್ಚಾಗಿತ್ತು. ಆ ಹುಡುಗನು ಹುಡುಗಾಟಕ್ಕೆ ಗಾಲಿಯ ಹತ್ತಿರ ಬಂದನು (ಬೇಕಾದರೆ ಅವನನ್ನೇ ವಿಚಾರಿಸಬಹುದು) ಡ್ರೈವರನು ಬಹಳ ಚತುರತೆಯಿಂದಲೂ ಮನಸ್ಥೈರ್ಯದಿಂದಲೂ ಗಾಡಿಯನ್ನು ನಿಲ್ಲಿಸಿದನು. ಆದರೆ ಆಕಸ್ಮಿಕ ವಾಗಿ ಅದು ಮುಂದೆ ಹೋಯಿತು. ಇವನಲ್ಲದೆ ಇನ್ನಾರಾದರು ಡ್ರೈವರ್ ಆಗಿದ್ದರೆ ಸುಮಾರು ೮–೧೦ ಹುಡುಗರ ಮೇಲೆ ಹೊಡೆಯುತ್ತಿದ್ದರು.

ಈತನು ಕೇವಲ ಒಂದೇ ಹುಡುಗನಮೇಲೆ ಹೊಡೆದಿದ್ದಾನೆ. ಆದ್ದರಿಂದ ಸರಕಾರದಲ್ಲಿ ಈತನಿಗೆ ಏನಾದರೂ ಬಹುಮಾನ ಕೊಡಿಸಬೇಕು," ಎಂತ ಹೇಳಿದರಂತೆ. ಜುಲ್ಮಾನೆ ಹಣವು ಡ್ರೈವರನಿದೂ ಕಂಡಕ್ಟರನಿಗೂ ವಿನಾಯಿತಿ ಆಯಿತಂತೆ. ಆದರೆ ವಕೀಲರ ವಾದದಂತೆ ಬಹುಮಾನ ಮಾತ್ರ ಸಿಕ್ಕಲಿಲ್ಲವಂತೆ. ಅಯ್ಯೋ ಪಾಪ!

---

# ಪಾಪಾಶಾಸ್ತ್ರಿಗಳು

ಪಾಪಾ ಶಾಸ್ತ್ರಿಗಳು ಹದಿನಾರಾಣೆ ಸನಾತನ ಧರ್ಮದ ಬ್ರಾಹ್ಮಣರು. ಇವರ ಜನ್ಮ ನಾಮವು ವೆಂಕಟರಮಣ ಶಾಸ್ತ್ರಿಗಳು ಅಂತ. ಆದರೆ ಪಾಪಾ ಶಾಸ್ತ್ರಿ ಎನ್ನುವ ಹೆಸರು ಇವರ ತಂದೆ ತಾಯಿಗಳು ಅಕ್ಕರೆಯಿಂದ ಕರೆದ ನಲವಿನ ಹೆಸರು. ಆದರೆ ನಮ್ಮೂರಿನ ಹುಡುಗರು ಈ ಹೆಸರಿನ ಮೇಲೆ ಬಹಳ ಟೀಕೆ ಟಿಪ್ಪಣಿಗಳನ್ನು ನಡೆಯಿಸಿದ್ದಾರೆ. ಇವರಿಗೆ ಪೀಪಾಯಿ ಶಾಸ್ತ್ರಿಗಳೆಂದು ಲೇವಡಿ ಎಬ್ಬಿಸುವುದು ಅವರ ದಿನಚರಿಯ ಕೆಲಸ. ಇವರಿಗಿರುವ ಗುಡಾಣದ ಹೊಟ್ಟೆಯೇ ಇದಕ್ಕೆ ಮೂಲ. ಎದೆಯ ಮೇಲೆ ಪಂಚೆಯನ್ನು ಉಟ್ಟುಕೊಳ್ಳುವರು. ದೊಡ್ಡವರು, ಇವರು ಸರಾಸರಿ ಮನುಷ್ಯನಿಗಿಂತ ಹೆಚ್ಚು ಪಾಪ ಸಂಘಟನೆ ಮಾಡಿರುವುದರಿಂದ ಆ ಹೆಸರು ಬಂದಿರುವುದೆಂದು ತರ್ಕಮಾಡಿದ್ದಾರೆ. ಆದರೂ ಶಾಸ್ತ್ರಿಗಳು ನಮ್ಮವರು, ಹದಿನಾರಾಣೆ ಸನಾತನ ಧರ್ಮದ ಬ್ರಾಹ್ಮಣರು.

ತೀಡಿದ ಕಚ್ಚೆ, ಹೆಗಲಮೇಲೆ ಕೆಂಪು ಅಂಚಿನ ಉತ್ತರೀಯ, ಮೇಲ್ತರದ ಸ್ಫಟಿಕಮಣಿಹಾರ ಮತ್ತು ರುದ್ರಾಕ್ಷಿ ಸರಗಳು. ನೋಡುವುದಕ್ಕೆ ಬಹಳ ಆನಂದವಾಗುತ್ತೆ. ಆದರೆ ವಿಧಾತನು ಶಾಸ್ತ್ರಿಗಳಿಗೆ ಬಹಳ ಅನ್ಯಾಯ ಮಾಡಿದಂತೆ ತೋರುತ್ತೆ. ಶಾಸ್ತ್ರಿಗಳನ್ನು ಒಂದು ಸಾರಿ ನೋಡಿದವರು ಎಂತಹ ದೊಡ್ಡ ಜಾತ್ರೆಯಲ್ಲಿಯಾದರೂ ಗುರ್ತಿಸಬಹುದು. ಚಿಕ್ಕತಲೆ, ಸಣ್ಣ ಹಣೆ, ಬುರುಡೆ ಮೂಗು ಮೀಸೆಯ ಸಂದಿಯಲ್ಲೊಂದು ಬಾಯಿ. ಮೀಸೆಯಿಂದ ಅದು ಆಚ್ಛಾದಿತವಾಗಿರುವುದರಿಂದ ಅದರ ಗಾತ್ರ ಗೊತ್ತಾಗುವ ಹಾಗಿಲ್ಲ ಒಂದು ಸಾರಿ ಶಾಸ್ತ್ರಿಗಳು ರಾಯರ ಮನೆಗೆ ನವರಾತ್ರಿಯಲ್ಲಿ ಹಬ್ಬದ ಊಟಕ್ಕೆ ಹೋಗಿದ್ದರು. ಶಾಸ್ತ್ರಿಗಳ ಮಂತ್ರವು ಎಕ್ಸ್‌ಪ್ರೆಸ್ ಟ್ರೇನಿಗಿಂತಲೂ ವೇಗವಾಗಿ ಹೋಗುತ್ತಿತ್ತು. ರಾಯರ ಕೊನೆಯ ಮಗ

ಚಂದ್ರನು ಅವನ ತಂದೆಯನ್ನು "ಅಪ್ಪಾ, ಶಾಸ್ತ್ರಿಗಳಿಗೆ ಬಾಯಿ ಎಲ್ಲಿದೆ, ಎಲ್ಲಿಂದ ಮಂತ್ರ ಹೇಳುತ್ತಾರೆ" ಎಂದನು. ಶಾಸ್ತ್ರಿಗಳಿಗೂ ನಗೆ ಬಂದಿತು. ತಮ್ಮ ಮೀಸೆಯನ್ನೆಲ್ಲಾ ಮೇಲಕ್ಕೇರಿಸಿ ತೋರಿಸಿದರು. ಶ್ರೀಕೃಷ್ಣನು ಯಶೋದೆಗೆ ಬ್ರಹ್ಮಾಂಡವನ್ನು ತೋರಿದ ತೆರದಿ ಶಾಸ್ತ್ರಿಗಳು ಬಾಯಿ ಬಿಟ್ಟರು. ಇರಲಿ. ಕಣ್ಣು ಪೂತು ಹೋಗಿದೆ. ಖಾಲಿ ದೋಸೆ ಮುಖ. ಮೊಂಡ ಕೈಕಾಲುಗಳು, ಹಿಂದೆ ಹೇಳಿದ ಗುಡಾಣ ಹೊಟ್ಟೆ.

ಶಾಸ್ತ್ರಿಗಳು ವಿದ್ಯಾವಂತರು. ಕನ್ನಡ ಮೂರನೇ ಇಯತ್ತೆಯೇ ಇವರ ವಿದ್ಯಾಧಿದೇವತೆಯ ಮಂದಿರದ ಶಿಖರ. ಸಂಸ್ಕೃತವೂ ಬರುತ್ತೆ. ಕೆಲವು ಮುಖ್ಯವಾದ ಮಂತ್ರಗಳನ್ನು ಗಿಳಿಪಾಠ ಮಾಡಿದ್ದಾರೆ ಅಲ್ಲದೆ ದೇವನಾಗರೀ ಭಾಷೆಯಲ್ಲಿ ಯಥೇಚ್ಛವಾಗಿ ಭರ್ತ್ಸನ ಮಾಡುವದಕ್ಕೂ ಬರುತ್ತೆ. "ಮಾತೃಗಾಮಿ, ವಿಧವಾಪತಿ" ಇತ್ಯಾದಿ ಶಬ್ದಗಳು ಅವರ ನಾಲಿಗೆಯ ಮೇಲೆ ನಲಿದಾಡುತ್ತಲೇ ಇರುತ್ತವೆ ಅನೇಕ ವೇಳೆ ಸನಾತನ ಧರ್ಮದ ಮೇಲೆ ಆಘಾತ ಒದಗಿದಾಗ ಶಾಸ್ತ್ರಿಗಳಿಗೆ ವಿಷಯ ಗೊತ್ತಿಲ್ಲ ದಿದ್ದರೂ ತಮ್ಮ ಗಡುಸು ಗಂಟಲಿನಿಂದ ಎದುರಾಳಿಗಳನ್ನು (ಅವರ ಪರೋಕ್ಷ ದಲ್ಲಿ) ನಡುಗಿಸಿದ್ದಾರೆ ಶಾರದಾ ಬಿಲ್ ಜಾರಿಗೆ ಬರುವುದೆಂದು ತಿಳಿದಾಗ ಶಾಸ್ತ್ರಿಗಳು ನಮ್ಮೂರಿನ ದೇವಸ್ಥಾನದಲ್ಲಿ "ಆ ಹುಚ್ಚುಮುಂಡೆ ಶಾರದೆಗೆ ಏನು ಗೊತ್ತಿದೆ. ಶಾಸ್ತ್ರದಲ್ಲಿ ಅಷ್ಟವರ್ಷಾತ್ ಭವೇತ್ ಕನ್ಯಾ ಅಂತಾ ಇದೆ. ಹೀಗಿರುವಲ್ಲಿ ಹದಿನಾಲ್ಕು ವರ್ಷಗಳನ್ನು ಕಳೆದು ಮನೆಯಲ್ಲಿ ಮಕ್ಕಳನ್ನು ಹೆತ್ತ ಹುಡುಗಿಯರಿಗೆ ಲಗ್ನವೆ? ಆದುದರಿಂದಲೇ ಈಗ ಮಳೆ, ಬೆಳೆ ಗಳ ಅಭಾವ. ನಾನು ಚಿಕ್ಕವನಿರುವಾಗ...." ಶಾಸ್ತ್ರಿಗಳು ತಮ್ಮ ಚಿಕ್ಕಂದಿ ನಲ್ಲಿ ರಾಮರಾಜ್ಯವಿತ್ತೆಂದೂ, ಚಿನ್ನವನ್ನೇ ಬಿತ್ತಿ ಬೆಳೆಯುತ್ತಿದ್ದರೆಂದೂ ಹೇಳುವರು. ಅಲ್ಲದೆ ಹಿಂದಿನ ಕಾಲದಲ್ಲಿ ಇದ್ದುದು, ನಡೆದುದು ಎಲ್ಲವೂ ಒಳ್ಳೆಯದು, ಈಗಿನದು ಕೆಟ್ಟದು ಎಂಬುದೇ ಅವರ ಸಿದ್ಧಾಂತ. ಯಾರೇ ಆಗಲಿ ಶಾಸ್ತ್ರಿಗಳನ್ನು ಎದುರಿಸಿದರೆ, ಅವರ ಗತಿಯಾಯಿತು. ಕಿವಿಯೊಡೆ ಯುವ ತನಕ ಕೂಗಿ ಮುಖದ ಮೇಲೆ ಚೆನ್ನಾಗಿ ಉಗುಳಿ ಆ ಸ್ಥಳದಿಂದ ಹೊರಟೇ ಹೋಗುತ್ತಿದ್ದರು.

ಇವರು ಕರ್ಮಠ ಬ್ರಾಹ್ಮಣರು. ಬಹು ಬುದ್ಧಿವಂತಿಕೆಯಿಂದ

ಕರ್ಮಕಾಂಡವನ್ನು ರಬ್ಬರಿನ ಹಾಗೆ ಮಾಡಿಕೊಂಡಿದ್ದಾರೆ. ತಮಗೆ ಬೇಕಾದುದನ್ನು ಲಂಬಿಸುವುದಕ್ಕೂ, ಬೇಡವಾದುದನ್ನು ಸಂಕುಚಿತಮಾಡುವುದಕ್ಕೂ ಬರುತ್ತೆ. ಒಂದು ಸಾರಿ ಅಮಾವಾಸ್ಯೆ ಕತ್ತಲಿನಲ್ಲಿ ಎತ್ತೋ ಹೊರಟಿದ್ದರು. ಕತ್ತಲಿನಲ್ಲಿ ಕರಿಯ ನಾಯಿಕಿಯ ಕಾಣುತ್ತದೆಯೆ? ತುಳಿದರು. "ಖೊಯ್ಯ್ ಕ್" ಎಂದಕೂಡಲೇ ಕಟ್ಟೆಯ ಮೇಲೆ ಕುಳಿತವರಿಗೆ ಕೇಳುವಂತೆ "ಅಯ್ಯೋ ನಾಯಿಮುಂಡೇದೆ, ನಾನೆಲ್ಲಿದ್ದೇನೆ, ನೀನೆಲ್ಲಿದ್ದೀಯಾ, ನಾ ಇಲ್ಲಿ ಬಂದ್ರೆ ನೀ ಅಲ್ಯಾಕೆ, ಖೊಯ್ಯ್ ಅನ್ನ ಬೇಕು." ರಾತ್ರಿ ಹೊತ್ತು ಛಳಿ, ನೀರಲ್ಲಿ ಮುಳುಗಬೇಕಾಗುವುದೆಂದು ಹೀಗೆ ಉಪಾಯ ಹೂಡಿದರು.

ಶಾಸ್ತ್ರಿಗಳಿಗೆ ಜ್ಯೋತಿಷ್ಯದಲ್ಲಿಯೂ ಪರಿಶ್ರಮವಿದೆ. ಸಮಯ ಸಂದರ್ಭಗಳನ್ನೂ, ಸನ್ನಿವೇಶಗಳನ್ನೂ ದೃಕ್ಪಥದಲ್ಲಿಟ್ಟುಕೊಂಡೇ ತಮ್ಮ ಪಂಚಾಂಗವನ್ನು ಬಿಚ್ಚುವರು. ವಿಷಯ ಸರಿಯಾಗಿ ಗೊತ್ತಾಗದಿದ್ದರೆ, ಈಗ ರಾಹುಕಾಲವಿದೆಯೆಂದೂ ಮುಂದೆ ಯಾವಾಗಲಾದರೂ ಬರಬೇಕೆಂದೂ ಹೇಳುವರು. ಆ ಮಧ್ಯದಲ್ಲಿ ವಿಷಯವನ್ನು ತಿಳಿದುಕೊಂಡು ಜೋತಿಷ್ಯಹೇಳುವರು ಒಂದು ಸಾರಿ, ಶಾಸ್ತ್ರಿಗಳಲ್ಲಿ ಕೆಲವು ತಗಡುಗಳು (Zinc Sheets) ಇದ್ದವು. ಅವು ಬಹು ಅಗತ್ಯವಾಗಿ ನನಗೆ ಬೇಕಾಗಿದ್ದುವು ಶಾಸ್ತ್ರಿಗಳು ಕಪಿಮುಷ್ಟಿಯವರು. ಅವರಿಗೆ ತೆಗೆದುಕೊಂಡ ಅಭ್ಯಾಸವೇ ಹೊರತು, ಕೊಟ್ಟ ಅನುಭವವಿಲ್ಲ. ಹೇಗಾದರೂ ತಗಡುಗಳನ್ನು ತೆಗೆಯಬೇಕು. ಕೂಲಿಯವನೊಂದಿಗೆ ಶಾಸ್ತ್ರಿಗಳ ಮನೆ ಹೊಕ್ಕೆನು. ಕೂಲಿಯವನನ್ನು ಅವರ ಎದುರುಮನೆ ಜಗುಲಿಯ ಮೇಲೆ ಕುಳ್ಳಿರಿಸಿದುದಾಯಿತು. ಶಾಸ್ತ್ರಿಗಳು ಆಗತಾನೇ ಊಟಮಾಡಿ ತಾಂಬೂಲ ಚರ್ವಣ ಮಾಡುತ್ತಿದ್ದರು ತಮ್ಮ ಸಹಜವಾದ ಮುಗುಳ್ ನಗೆಯಿಂದ ಕುಶಲವಾರ್ತೆಯನ್ನು ಕೇಳಿದರು. ಕಡೆಗೆ, ನಾನು ಒಂದು ಅಗತ್ಯವಾದ ಕೆಲಸದ ವಿಷಯದಲ್ಲಿ ಪ್ರಶ್ನೆಯನ್ನು ಕೇಳುವುದಕ್ಕೆ ಬಂದಿರುವೆನೆಂದೂ ಹೇಳಿ ಎಲೆ ಅಡಿಕೆಯೊಂದಿಗೆ ಮೂರು ಕಾಸು ದಕ್ಷಿಣೆಯನ್ನೂ ಇಟ್ಟೆನು. ಶಾಸ್ತ್ರಿಗಳು ತಮ್ಮ ದಪ್ಪನೆಯ ಹೊತ್ತಿಗೆಯನ್ನು ತೆಗೆದು, ಕವಡಿಗಳನ್ನು ಎಸೆದು, ನನ್ನ ಕೆಲಸವು ಅನುಮಾನವಿಲ್ಲದೆ ತ್ವರಿತವಾಗಿ ಆಗುವುದೆಂದು ಹೇಳಿದರು. ಹೇಳಿದೆನು, ಅವರಲ್ಲಿರುವ ತಗಡುಗಳನ್ನು ಕೊಡುವುದಕ್ಕೆ. ಶಾಸ್ತ್ರಿಗಳು ಅಡ್ಡಕತ್ತರಿಯಲ್ಲಿನ ಅಡಿಕೆಯಂತಾದರು. ತಗಡುಗಳನ್ನು ಕೊಡ

ದಿದ್ದಲ್ಲಿ ತಮ್ಮ ಪ್ರಶ್ನೆ ಸುಳ್ಳಾಗುವುದು. ಇನ್ನು ಕೊಡುವುದಕ್ಕೆ ಸಂಕಟ. ಒಳಗಡೆ ಜ್ವಾಲಾಮುಖಿಯ ಅಗ್ನಿಪ್ರವಾಹವೇ ಇದ್ದರೂ ಹುದಿಗಿಟ್ಟುಕೊಂಡು ಮೇಲೆ ನೋಡುವುದಕ್ಕೆ ಶಾಂತತೆಯಿಂದ ಇರುವಂತೆ ತಮ್ಮ ಸಿಟ್ಟನ್ನು ಯೋಗಿಯಂತೆ ಮೆಟ್ಟಿ, ತಗಡುಗಳನ್ನು ನಗೆಮೊಗದಿಂದ ಕೊಟ್ಟರು

ಎಂತಹ ಮನುಷ್ಯನಾದರೂ ಎಡವುವುದು ಸ್ವಾಭಾವಿಕ. ಆದರೆ ಶಾಸ್ತ್ರಿಗಳು ಎಡವಲಿಲ್ಲ ಮುಗ್ಗರಿಸಿದರು. ನನ್ನ ಸ್ನೇಹಿತ ..........ರಾಯರ ಹೆಂಡತಿಯು ಮಕ್ಕಳಿಲ್ಲದೆ ಅರಳಿ ಮರಗಳನ್ನು ಸುತ್ತಿ ಸುತ್ತಿ, ಪಿತ್ತ ಹೆಚ್ಚಾಗಿ ತಲೆ ತಿರುಗಿ, ಪಾಪಾ ಶಾಸ್ತ್ರಿಗಳನ್ನು ಪ್ರಶ್ನೆಯನ್ನು ಕೇಳಲು ಗಂಡನನ್ನು ಕಳುಹಿಸಿದಳು. ಪ್ರಶ್ನೆಯ ವಿಷಯ ದೊಡ್ಡದಿದ್ದುದರಿಂದ ಒಂದು ರೂಪಾಯಿ ದಕ್ಷಿಣೆ ಕೊಟ್ಟರು. ಶಾಸ್ತ್ರಿಗಳು ತಮ್ಮ ದಿವ್ಯವಾದ ಅಮೃತವಾಣಿಯಿಂದ ನುಡಿದರು. ರಾಯರು ಬಂದಿರುವ ಕೆಲಸವು ಮಹತ್ತರವಾದರೂ, ಇನ್ನೊಬ್ಬರ ಸಹಾಯದಿಂದ ಕೈಗೂಡುವುದೆಂದೂ ಹೇಳಿದರು: ರಾಯರ ಎದೆಗೆ ಸಿಡಿಲು ಬಡಿದಂತಾಯಿತು. ಪ್ರಶ್ನೆ ಇಂತಹದೆಂಬುದನ್ನು ಹೇಳದೆ ಮನೆಗೆ ಹೋದರು.

ಶಾಸ್ತ್ರಿಗಳು ಈಚೆಗೆ ಜ್ಯೋತಿಷ್ಯ ಹೇಳುವುದನ್ನು ಬಿಟ್ಟಿದ್ದಾರೆ. ಅವರಿಗೆ ಇಬ್ಬರು ಮಕ್ಕಳು. ಒಂದು ಹೆಣ್ಣು, ಒಂದು ಗಂಡು, ಆ ಹೆಣ್ಣುಮಗುವನ್ನು ಎಂಟನೆ ವರ್ಷದಲ್ಲಿ ಸುಬ್ಬಾಭಟ್ಟರ ಮಗ ಹದಿನಾರು ವರ್ಷದ ರಾಮಾಭಟ್ಟನಿಗೆ ಲಗ್ನ ಮಾಡಿದರು. ೩೦ ಗುಣಗಳು ಕೂಡಿಬಂದಿದ್ದುವು ಎಲ್ಲಾ ಭಾಗದಲ್ಲಿಯೂ ಜೋತಿಷ್ಯದ ಒಪ್ಪಿಗೆಯ ಮುದ್ರೆ ಬಿದ್ದಿತ್ತು. ಸ್ವಯಂ ಶಾಸ್ತ್ರಿಗಳೇ ಗುಣಿಸಿ ಜಾತಕ ಕೂಡುತ್ತದೆಯೆಂದು ಆಶ್ವಾಸನವಿತ್ತರು. ಆದರೆ ಲಗ್ನವಾದ ನಾಲ್ಕನೆ ದಿವಸ ರಾಮಾಭಟ್ಟನು, ಶಾಸ್ತ್ರಿಗಳ ಜೋತಿಷ್ಯವನ್ನು ಸುಳ್ಳುಮಾಡಬೇಕೆಂದೋ ಜಗತ್ತಿನ ದುರ್ವ್ಯಾಪಾರಾದಿಗಳನ್ನು ನೋಡಿ ಬೇಸರಿಕೆಯಿಂದಲೋ ಮನೆಯವರು ಬೇಡವೆಂದರೂ ಮೊಂಡತನದಿಂದ ಪರಲೋಕಯಾತ್ರೆಯನ್ನು ಕೈಕೊಂಡನು. ಇದೇ ಕೊನೆಯಾಯಿತು, ಶಾಸ್ತ್ರಿಗಳು ಜೋತಿಷ್ಯ ನೋಡುವುದು.

ಶಾಸ್ತ್ರಿಗಳಿಗೂ ಅವರ ಮಗ ಶಾಮನಿಗೂ, ಉತ್ತರ ಧ್ರುವಕ್ಕೂ ದಕ್ಷಿಣ ಧ್ರುವಕ್ಕೂ ಇರುವಷ್ಟು ಅಂತರವಿದೆ. ಇಪ್ಪತ್ತನೆಯ ಶತಮಾನದ ಸೊಗಸಿನ

ಪ್ರವಾಹಕ್ಕೆ ಅವನು ಶಿಲುಕಿದ್ದಾನೆ. ಶಾಸ್ತ್ರಿಗಳ ಸನಾತರ ಧರ್ಮದ ಮೇಲಣ ಉಪನ್ಯಾಸಗಳು ವೇಶ್ಯೆಗೆ ಪಾತಿವ್ರತ್ಯವನ್ನು ಬೋಧಿಸಿದಂತಾದವು. ಆದರೂ ಮುಂಜುಟ್ಟನ್ನು ಟಗರಿನ ಕೊಂಬಿನಂತೆ ತಿರುವಿ, "ಜಿ. ಆಯ್. ಪಿ." ಎಂಜಿನ್‌ಗಳು ನಾಚುವಂತೆ "ಭುಗ್ ಭುಗ್" ಎಂತ ಸಿಗರೇಟಿನ ಹೊಗೆ ಬಿಡುತ್ತಾ ಒಂದು ಬೌರಿ ಕುದುರೆಯಂತೆ "ಠೊಫ್" ಎಂತ ಸಾಹೇಬನಂತೆ ತಿರುಗಾಡುವುದನ್ನು ನೋಡಿದರೆ, ಅವರಿಗೆ ಬೇಡವಾದರೂ ಸಂತೋಷವು ಮೀಸೆಯ ಗೊಂಚಲಿನಿಂದ ಹೊರಸೂಸುವುದು. ಅಲ್ಲದೆ ಶಾಮನು ಪದವೀಧರನು. ಎತ್ತು, ಎಮ್ಮೆಗಳಿಗೆ ಹೇಗೆ ಎರಡು ಕೊಂಬುಗಳು ಇವೆಯೋ ಹಾಗೆಯೇ ಪಧವೀಧರರ ಹೆಸರಿನ ಮುಂದೆ ಇರುವ ಪದವಿಗಳೇ ಕೊಂಬುಗಳೆಂದು ಶಾಸ್ತ್ರಿಗಳು ಹೇಳುವರು,

ಒಂದೊಂದು ವೇಳೆ ಅನ್ನದಲ್ಲಿ ಕಲ್ಲು ಸಿಕ್ಕಿದಂತೆ ಧರ್ಮದ ಮೇಲೆ ಕಟುತರವಾದ ಪ್ರಶ್ನೆಗಳನ್ನು ಶಾಮನು ಹಾಕುವನು. ಆದರೆ ಶಾಸ್ತ್ರಿಗಳು ಹೇಳುವುದಕ್ಕೆ ಎಲ್ಲರೂ ಒಪ್ಪಬೇಕು. ಇಲ್ಲದಿದ್ದರೆ ಅವರೆಲ್ಲ ನಾಸ್ತಿಕರು, ಇದೇ ಅವರ ವಾದ.

ಶಾಸ್ತ್ರಿಗಳಿಗೆ ಈಗ ಇಳಿ ವಯಸ್ಸು, ಅಲ್ಲದೆ ಬಹುಮೂತ್ರ ರೋಗದಿಂದ ನರಳುತ್ತಿದ್ದಾರೆ. ಶಾಸ್ತ್ರಿಗಳು ತಮ್ಮ ಹರೆಯದ ಭರದಲ್ಲಿ ದಾರಿ ತಪ್ಪಿದ್ದರಿಂದ ಈ ರೋಗವು ಪ್ರಾಪ್ತವಾಗಿ, ಹಿಂದೆ ಗಳಿಸಿದ ಗಂಟನ್ನು ಅಸಲು ಬಡ್ಡಿಯಿಂದ ಅನುಭವಿಸುತ್ತಿದ್ದಾರೆಂದು ಹೇಳುತ್ತಾರೆ. ಇದು ವಾದಗ್ರಸ್ತವಾದ ವಿಷಯ. ಆದರೂ ಶಾಸ್ತ್ರಿಗಳು ನಮ್ಮವರು ಸನಾತನ ಧರ್ಮದ ಬ್ರಾಹ್ಮಣರು.

---

# ಮುದ್ರಾರಾಕ್ಷಸನ ಹಾವಳಿ

ನಾಗರಿಕತೆ ಶಿಖರಕ್ಕೇರಿದ ಇಂದಿನ ದಿನಗಳಲ್ಲಿ ಅಚ್ಚು ಪದ್ಧತಿಯು ನಮ್ಮ ಜೀವನದಲ್ಲಿ ಹಿರಿದಾದ ಸ್ಥಾನವನ್ನು ಅಲಂಕರಿಸಿದೆಯೆಂಬುದು ಸರ್ವ ವಿದಿತವಾಗಿದೆ. ಆದರೆ ಒಂದು ಅನುಕೂಲದ ಹಿಂದೆಯೇ ಅನಾನುಕೂಲವೂ ಸಹ ಛಾಯಾನುವರ್ತಿಯಾಗಿ ಹಿಂಬಾಲಿಸುತ್ತಿದೆಯೆಂಬುದು ನಿಸರ್ಗ ನಿಯಮ.

ಇದೇ ಅಚ್ಚು ಪದ್ಧತಿಯನ್ನೇ ಉದಾಹರಣೆಗೆ ತೆಗೆದುಕೊಳ್ಳೋಣ. ಮೊದಲಿಗೆ ತಾಳೇಗರಿಯ ಮೇಲೋ ಕತ್ತೆ ಕಾಗದದ ಮೇಲೋ ಸೊಂಟ ಬಗ್ಗಿಸಿ ದಿನವಿಡೀ ಬರೆದರೂ ನೂರಾರು ಹಾಳೆಗಳು ತುಂಬುತ್ತಿರಲಿಲ್ಲ. ಆದರೆ ಕೇವಲ ಕೆಲವು ಗಂಟೆಗಳಲ್ಲಿ ಮುದ್ರಣ ಯಂತ್ರ ಸಾಮಗ್ರಿ ಸಾಧನ ಗಳಿಂದ ಹಲವಾರು ಸಹಸ್ರ ಪುಸ್ತಕಗಳನ್ನು ಒಂದೇ ದಿನದಲ್ಲಿ ನಾವು ನೋಡ ಬಹುದು. ಮೊಳೆ ಜೋಡಿಸುವವರ ಕೈವಾಡದಿಂದಲೋ, ಪ್ರೂಫ್ ರೀಡರ್ ಅಲಕ್ಷ್ಯದಿಂದಲೋ ಅನಿವಾರ್ಯವಾಗಿ ಅಚ್ಚು ದೋಷಗಳು ಉಳಿದುಬಿಡು ತ್ತವೆ ಕೆಲ ಸಂದರ್ಭಗಳಲ್ಲಿ ಇವು ಅತಿಯಾದ ವಿಪರ್ಯಾಸ ಕೊಡುವಂತಹ ಶಬ್ದಗಳಾಗಿ ಮಾರ್ಪಟ್ಟು ಅನರ್ಥಕ್ಕೇ ಕಾರಣವಾಗುತ್ತದೆ. ನನ್ನ ಅನುಭವಕ್ಕೆ ಬಂದಿರುವ ಅಂತಹ ಶಬ್ದಗಳನ್ನಿಲ್ಲಿ ಮಾದರಿಗಾಗಿ ಕೊಟ್ಟಿದ್ದೇನೆ, 'ಮಹಾತ್ಮ ಗಾಂಧಿಯವರು ಈ ದಿನ ಸೇವಾಗ್ರಾಮದಿಂದ ಹಾದರಕ್ಕೆ ಬಂದಿಳಿದರು.' ದಾದರಕ್ಕೆ ಬಂದಿಳಿದರು ಎಂದಿರಬೇಕಿತ್ತು. ಪೂಜ್ಯ ಗಾಂಧಿಜಿಯವರನ್ನೇ ದುಸ್ಥಿತಿಗೀಡುಮಾಡುವ ಈ ಕಂಪಾಜಿಟರ್ ಮಹಾ ಶಯ ನಮ್ಮಂತಹವರನ್ನು ಏನು ಮಾಡುವನೋ ?

ಒಂದು ವಾಕ್ಯದಲ್ಲಿ 'ಮಂತ್ರಿಮಂಡಲ' ಎಂಬುದು 'ಮೂತ್ರಿಮಂಡಲ' ಎಂಬುದಾಗಿತ್ತು, ಕೊಳೆತು ನಾರುವ ಆ 'ಮಂತ್ರಿಮಂಡಲ' 'ಮೂತ್ರಿ

ಮಂಡಲ' ಮಾಡಿದ ಆ ಮಹಾಶಯನ ಬುದ್ಧಿ ಚಾತುರ್ಯಕ್ಕೆ ಸಾಟಿ ಯುಂಟೆ !

ಒಬ್ಬ ರಾಯನ ಗುಣಗಾನ ಮಾಡುವ ಪ್ರಸಂಗ. 'ಅವರ ಮನಸ್ಸು ಪೂರಾ ಚಿಕ್ಕದು' ಅವರ ವಯಸ್ಸು ಪೂರಾ ಚಿಕ್ಕದು ಎಂತ ಇರಬೇಕಾ ಗಿತ್ತು. ಇದನ್ನೋದಿದ ಆ ರಾಯರು ಆ ದುರದೃಷ್ಟ ಪತ್ರಿಕೆಯ ಮೇಲೆ ಮಾನನಷ್ಟ ಮೊಕದ್ದಮೆ ಹೂಡುವ ಯೋಚನೆ ಮಾಡುತ್ತಾರೋ ಇಲ್ಲವೋ ನೀವೇ ಹೇಳಿ.

ಒಂದು ಸಂಸ್ಥಾನದ ಅರಸರ ಪಟ್ಟಾಭಿಷೇಕ ಮಹೋತ್ಸವದ ವರ್ಣನೆ ಒಂದು ಪತ್ರಿಕೆಯಲ್ಲಿ ಅವ್ಯಾಹತವಾಗಿತ್ತು. ಹಾಗೆಯೇ ರಾಣಿಯವರ ಪಟ್ಟಾಭಿಷೇಕ ಕುರಿತು "ಇವರಿಗೆ ಕೆರೆಯಲ್ಲಿ ಪಟ್ಟಾಭಿಷೇಕವಾಗುವುದು" ಎಂತ ಅಚ್ಚಾಗಿತ್ತು. "ಇವರಿಗೆ ತೆರೆಯಲ್ಲಿ ಪಟ್ಟಾಭಿಷೇಕವಾಗುವುದು" ಎಂಬುದಾಗಿ ಇರಬೇಕಾಗಿತ್ತು.

ಮಹಾ ಮೇಧಾವಿಗಳೊಬ್ಬರು ಹೆಚ್ಚಿನ ಶಿಕ್ಷಣಕ್ಕೆ ಅಮೆರಿಕಕ್ಕೆ ಹೋಗಿ ಆಗ ತಾನೆ ನಮ್ಮ ದೇಶಕ್ಕೆ ಮರಳಿದ್ದರು ಅವರ ಬಗ್ಗೆ ಒಂದು ದಿನ ಪತ್ರಿಕೆಯಲ್ಲಿ ಸುದ್ದಿ ಈ ರೀತಿ ಪ್ರಕಟವಾಗಿತ್ತು. "ಇವರು ಅಮೆರಿಕಕ್ಕೆ ಹೋಗಿ ಆಭಾಸ ಮಾಡಿಕೊಂಡು ಬಂದಿದ್ದಾರೆ" "ಅಭ್ಯಾಸ ಮುಗಿಸಿಕೊಂಡು ಬಂದಿದ್ದಾರೆ" ಎಂತ ಇರಬೇಕಿತ್ತು. ಆದರೆ ಕುಶಾಗ್ರಮತಿ ಕಂಪಾಜಿಟರನು ಅಮೆರಿಕದಲ್ಲಿ ಈ ಮಹಸೀಯರ ಆಭಾಸಪ್ರಕರಣ ಮುಗಿದು ಹಿಂದೂಸ್ಥಾನ ದಲ್ಲಿ ಮತ್ತೆ ಆರಂಭವಾಗಲಿದೆಯೆಂಬ ಅಂಶವನ್ನು ಜನತೆಗೆ ಅರುಹಿ ಮಹದುಪಕಾರ ಮಾಡಿದನು.

ದಿನಪತ್ರಿಕೆಗಳಲ್ಲಿ ಅಂದಿನ ಮಹತ್ವದ ಸುದ್ದಿಯನ್ನು ಕುಂಬಳಕಾಯಿ ಅಕ್ಷರದಲ್ಲಿ ಪ್ರಕಟಿಸುವ ಪರಿಪಾಠ ಬಹು ದಿನಗಳಿಂದಲೂ ಅನುಷ್ಠಾನ ದಲ್ಲಿದೆ. ಒಂದು ಸಾರಿ ಮಹಿಳಾ ದೇಶಪ್ರೇಮಿಗಳೊಬ್ಬರಿಗೆ ೬ ತಿಂಗಳ ಶಿಕ್ಷೆ ವಿಧಿಸಲಾಯಿತು. ಅಂದು ಅದೇ ಮಹತ್ವದ ಸುದ್ದಿಯಾಗಿತ್ತು. ಸರಿ, ಸಂಪಾದಕರು ಬರೆದುಕೊಟ್ಟರು. "........ರವರಿಗೆ ೬ ತಿಂಗಳು ಸಶ್ರಮ ಶಿಕ್ಷೆ" ಆದರೆ ಮಾರನೆಯ ದಿನ ಪತ್ರಿಕೆಗಳಲ್ಲಿ "ರವರಿಗೆ ೬ ತಿಂಗಳು" ಎಂದಿತ್ತು. ಗಂಡಸಿಗೆ ೬ ತಿಂಗಳು ಎಂದರೆ ಅಪಾರ್ಥವಾಗುವುದಿಲ್ಲ,

ಆದರೆ ಹೆಂಗಸಿಗೆ ೬ ತಿಂಗಳೆಂದರೆ? ಅಪರಾಧಗ್ರಸ್ತ ಕಂಪಾಜಿಟರನನ್ನು ಕೇಳಿದಾಗ ಸ್ಥಳಾಭಾವದಿಂದ ಹಾಗೆ ಮಾಡಿದನೆಂದು ಸಮಾಧಾನ ಕೊಟ್ಟ. ಆ ದುರದೃಷ್ಟ ಸಂಪಾದಕರ ಗತಿ ಏನಾಗಿರಬಹುದು ನೀವೇ ಯೋಚಿಸಿ.

ಈಗ್ಗೆ ಕೆಲವು ದಿನಗಳ ಹಿಂದೆ ಕರ್ನಾಟಕದ ಗಣ್ಯರೊಬ್ಬರು ವಿಧಿವಶ ರಾದರು. "......ರವರ "ವಿಯೋಗ' ಎಂಬುದು ".......ರವರ 'ನಿಯೋಗ' ಎಂತ ತಪ್ಪು ಬಿದ್ದಿತ್ತು. ಸತ್ತಮೇಲೂ ಅವರು ನಿಯೋಗ ಹೋಗುವ ಅವರ ದಾಕ್ಷಿಣ್ಯ ನೋಡಿ ಜನ ಅಚ್ಚರಿಗೊಂಡಿರಬೇಕಲ್ಲವೇ?

ತಿಳಿಯದಿದ್ದನ್ನು ಕೇಳಿ ತಿಳಿದುಕೊಳ್ಳಬೇಕೆಂಬ ಹವ್ಯಾಸಕ್ಕೆ ಮೊಳೆ ಜೋಡಿಸುವವ ಪ್ರಾಣ ಹೋದರೂ ಬೀಳಲಾರ. ಒಂದು ಸಾರಿ ನಾನು ಯಾವುದೋ ಒಂದು ಲೇಖನದಲ್ಲಿ "ಹಂಸತೂಲಿಕಾ ತಲ್ಪ" ಎಂತ ಪ್ರಯೋಗ ಮಾಡಿದ್ದೆ. ನನ್ನ ಕಂಪಾಜಿಟರ್ ಇದನ್ನು "ಕೂಲಿಕಾರರ ಕೆಲ್ಸ" ಎಂತ ಮಾಡಿದ್ದ. ನಾನು ಏನು ಬರೆದಿದ್ದೆ ಎಂಬುದು ನನಗೆ ತಿಳಿಯ ಲಿಲ್ಲ. ಈ ಅಭಿನವ ಬ್ರಹ್ಮನಿಗೆ ಅಂದು ನಾನು ಮನಸಾ ವಂದಿಸಿದೆ.

ಹಳೆ ದಿನದ ಮಿತ್ರನನ್ನು ಒಬ್ಬನು ಕಾಣುತ್ತಾನೆ. ತನ್ನ ಪ್ರೀತಿಯ ಪ್ರದರ್ಶನಾರ್ಥವಾಗಿ "ಎರಡು ಕರಗಳನ್ನೂ ಹಿಡಿದು ವಂದಿಸಿದನು" ಎಂತ ಕತೆಯಲ್ಲಿ ಒಂದು ಪ್ರಸಂಗ. ಈ ಸನ್ನಿವೇಶ ಕಂಪಾಜಿಟರನ ಕೈವಾಡ ದಿಂದ "ಎರಡು ಕೆರಗಳನ್ನು ಹಿಡಿದುಕೊಂಡು ವಂದಿಸಿದನು" ಎಂತ ಬದ ಲಾಗಿತ್ತು. ಕತೆಗಾರ ಹೊಳೆ ಬಾವಿ ಹಾರಿಕೊಂಡು ಮಾನ ಉಳಿಸಿ ಕೊಳ್ಳಲು ಯತ್ನಿಸಿದ್ದನಂತೆ!

ಒಂದು ಪತ್ರಿಕೆಯಲ್ಲಿ 'ದಿವಾನರು ಸಭಾಧ್ಯಕ್ಷತೆ ವಹಿಸಿದ್ದರು' ಎಂಬುದರ ಬದಲಾಗಿ 'ಜವಾನರು' ಎಂತ ತಪ್ಪು ಬಿದ್ದಿತ್ತು.

"ಕಾಂಗ್ರೆಸ್ಸಿನವರಿಗೆ ಮಂತ್ರಿತ್ವ ಕೊಟ್ಟರೆ ರಾಜಕೀಯ ವ್ಯವಸ್ಥೆಗೆ ಸಹಕಾರಿಯಾಗುತ್ತದೆ" ಎಂಬ ವಾಕ್ಯದಲ್ಲಿ 'ಅ' ಅಕ್ಷರವು 'ವ್ಯವಸ್ಥೆ' ಶಬ್ದನ ಹಿಂದುಗಡೆ ಬಿದ್ದು 'ಅವ್ಯವಸ್ಥೆ' ಎಂತಾಯಿತು.

"ಚತುರ್ಮಹಾನಾಯಕರ ಭೇಟಿ ಜರುಗಿದರೆ ಯುದ್ಧ ಸುಸಂಘಟಿತ ರೀತಿಯಲ್ಲಿ ನಡೆಯುವ ಸಂಭವವಿದೆ"ಎಂಬುದಕ್ಕೆ ಪ್ರತಿಯಾಗಿ "ನಡೆಯುವದ ಸಂಭವ" ಎಂತ ಬಿದ್ದಿತ್ತು.

ಹೀಗೆ ಈ ಸಾಹಿತ್ಯವನ್ನು ಬೇಕಾದಷ್ಟು ಲಂಬಿಸಬಹುದು. ಇದರಲ್ಲಿ ಅತಿಶಯೋಕ್ತಿಯೇನೂ ಇಲ್ಲ.

ಆದರೆ ಒಂದು ವಿಷಯ. ನಗೆಯನ್ನು ಹೊಗೆಯಾಗಿಯೂ, ಹೊಗೆಯನ್ನು ನಗೆಯಾಗಿಯೂ ಮಾರ್ಪಡಿಸಬಲ್ಲ ಆ ದಿವ್ಯ ಶಕ್ತಿ ಕಂಪಾಜಿಟರನಲ್ಲದೆ ಬೇರೊಬ್ಬರಿಗೆ ಇಲ್ಲ. "ರವಿ ಕಾಣದ್ದನ್ನು ಕವಿ ಕಂಡ" ಎಂತ ಹೇಳುತ್ತಾರೆ. ಆದರೆ "ಕವಿ ಕಾಣದ್ದನ್ನು ಕಂಪಾಜಿಟರ್ ಕಾಣುತ್ತಾನೆ" ಎಂತ ನಾಣ್ಣುಡಿಯು ಸಹ ಮಾರ್ಪಾಟು ಹೊಂದಬೇಕಾಗಿದೆ.

---

# ಆ ಭಾನುವಾರ

ನನ್ನ ಲೇಖನದ ಶಿರೋನಾಮೆಯನ್ನು ನೋಡಿ ನೀವು ಚಕಿತರಾಗಿ ಬಹುದು. ಆದರೆ ಏನು? ಸೋಮವಾರದ ಪ್ರಾತಃಕಾಲದ ನನ್ನ ಪರಿಸ್ಥಿತಿಯ ಗಂಟನ್ನು ಬಿಚ್ಚಲು ಯತ್ನಿಸುತ್ತೇನೆ. ನೋಡಿದರೆ ನೋಡಿ; ಬಿಟ್ಟರೆ ಬಿಡಿ.

ಶನಿವಾರ ಮಧ್ಯಾಹ್ನ ನಮ್ಮ ಕಛೇರಿಗೆ ಬಿಡುವು. ಭಾನುವಾರ ಸಂಪೂರ್ಣ ರಜ. ಆದರೆ ಒಂದುವರೆ ದಿನ ಅನುಭವಿಸಿದ ರಜದಿಂದ ಮತ್ತೆ ಆಫೀಸಿಗೆ ಹೋಗಬೇಕೆಂದರೆ......... ಸೊಸೆಯು ತವರುಮನೆಯಿಂದ ಅತ್ತೆಯ ಮನೆಗೆ ಹೋಗುವಾಗಲೂ ಇಷ್ಟು ದುಃಖವಾಗಲಿಕ್ಕಿಲ್ಲ. ಚಾತಕ ಪಕ್ಷಿಯು ಮಳೆಯನ್ನು ಇದಿರು ನೋಡುವಂತೆ ಆಫೀಸಿನಲ್ಲಿ ನಾವಾದರೂ ಭಾನುವಾರವನ್ನು ಇದಿರು ನೋಡುತ್ತಿರುತ್ತೇವೆ ಮತ್ತು ವಾರದಲ್ಲಿ ಏಳು ದಿವಸಗಳನ್ನೂ ಭಾನುವಾರ ಮಾಡೆಂದು ಹಲವು ದೇವರಿಗೆ ಹರಕೆ ಕಟ್ಟುತ್ತೇವೆ. ಆದರೇನು? ಆ ಭಾನುವಾರವು ಬರುವುದು ಒಂದೇ! ಆ ದಿವಸದಲ್ಲಿ ಯಾವ ಕೆಲಸವನ್ನೂ ಮಾಡದೆ ಕೇವಲ ಸುಖದಲ್ಲಿಯೇ ಕಾಲ ಕಳೆಯಬೇಕೆಂಬ ಬಯಕೆ. ಆದರೆ ಒಂದು ವಾರವಲ್ಲಿಯಾದರೂ ನನ್ನ ಬಯಕೆಯು ಈಡೇರಿರುವುದಿಲ್ಲ.

ಇರಲಿ. ನನ್ನ ಒಂದೇ ಒಂದು ಭಾನುವಾರದ ಅನುಭವವನ್ನು ಹೇಳುತ್ತೇನೆ. ಆ ದಿವಸ ಹೇಗಾದರೂ ಮಾಡಿ, ದಿನವೂ ಆರು ಗಂಟೆಗೆ ಏಳುವ ನಾನು ಒಂಬತ್ತು ಗಂಟೆಗೆ ಏಳಬೇಕೆಂದು ಮಾಡಿದೆ. ಆದರೆ ರಾತ್ರಿ, ಸುಮಾರು ಎರಡು ಗಂಟೆಯ ಹೊತ್ತಿನಲ್ಲಿ ಎರಡು ಬೆಕ್ಕುಗಳು ಎಲ್ಲ, ತಾಳ, ರಾಗ, ಮತ್ತು ಲಯಗಳ ಶಾಸ್ತ್ರಗಳನ್ನು ಧಿಕ್ಕರಿಸಿ ಕೂಗಲಾರಂಭಿಸಿದುವು. ಏನೋ, ಸ್ವಲ್ಪ ಹೊತ್ತು ಕೂಗಿ ಸುಮ್ಮನಾಗಬಹುವೆಂದು ಕಣ್ಣು

ಮುಚ್ಚಿದೆನು. ಆದರೆ? ನನ್ನ ಮೇಲಿನ ಹೊಟ್ಟೆಕಿಚ್ಚಿನಿಂದ ಇನ್ನೂ ಕಿರುಚುವಿಕೆಯು ಹೆಚ್ಚಾಯಿತು. ನನ್ನ ತಾಳ್ಮೆಯ ಅಣೆಕಟ್ಟು ಒಡೆದು ಚೂರಾಯಿತು. ಯೋಧನು ತನ್ನ ಆಜನ್ಮ ಶತ್ರುವನ್ನು ಬೆನ್ನಟ್ಟುವಂತೆ ಬೆತ್ತವನ್ನು (Walking-stick) ತೆಗೆದುಕೊಂಡು ನುಗ್ಗಿದೆನು. ಒಳ್ಳೆಯ ಗುರಿಯಿಂದಲೇ ಹೊಡೆದನು. ಶತ್ರುಪಕ್ಷವು ಪಲಾಯನವಾಗಿದ್ದಿತು. ಆದರೆ ಮೂರು ದಿವಸದ ಹಿಂದೆ ತಂದಿದ್ದ ಟೇಬಲ್ ಲ್ಯಾಂಪ್ ಗುರಿಗೆ ಆಹುತಿಯಾಗಿ ಒಡೆದು ಚೂರಾಗಿ ನನ್ನ ಹೆಂಡತಿಯ ಮೇಲೆ ಬಿತ್ತು. ಪ್ರಳಯವಾಯಿತೆನ್ನುವಂತೆ ಅವಳು ಚಿಟ್ಟನೆ ಚೀರಿದಳು. ಕಳ್ಳರು ಬಂದಿದ್ದಾರೆಂದು ನೆರೆಹೊರೆಯುವರನ್ನು ಎಬ್ಬಿಸುವುದಕ್ಕೆ ಹವಣಿಸುತ್ತಿದ್ದಳು. ನಾನು ಕಳ್ಳನಲ್ಲವೆಂದೂ ಅಗ್ನಿ ಸಾಕ್ಷಿಯಾಗಿ ಕೈಹಿಡಿದ ಗಂಡನೆಂದೂ ತಿಳಿಸುದರಲ್ಲಿ ನನ್ನ ಮೈ ಬೆವರಿಟ್ಟಿತು. ನನ್ನ ಹೆಂಡತಿಯು ಯಾವಾಗಲೂ ಸ್ವಲ್ಪ water-works. ಅಂದರೆ ಅವಳ ಕಣ್ಣುಗಳಲ್ಲಿ ನೆನೆದ ಮಾತ್ರಕ್ಕೆ ಗಂಗೆಯ ಅವತಾರವಾಗುತ್ತೆ. ಧಾರವಾಡ ಮತ್ತು ಹುಬ್ಬಳ್ಳಿ ಮುನಿಸಿಪಾಲಿಟಿಯವರು ಈ ಗುಟ್ಟನ್ನು ಸಾಧಿಸಬಾರದೆ! ಈ ಪ್ರಕರಣವು ಇಲ್ಲಿಗೆ ನಿಲ್ಲಲಿಲ್ಲ ಅವಳನ್ನು ಸಮಾಧಾನ ಮಾಡುವುದಕ್ಕೆ ನನ್ನ ಜೇಬಿನಲ್ಲಿದ್ದ ೫೨ ರೂಪಾಯಿಗೆ ಸಂಚಕಾರ ಬಿತ್ತು. ಒಂದು ಸಿಲ್ಕು ಸೀರೆಯನ್ನು ತಂದುಕೊಡುತ್ತೇನೆಂದು ಹೇಳಿ ಸಮಾಧಾನಪಡಿಸಿದ್ದಾಯಿತು ಯಾವಾಗಲೂ ಹೀಗೆಯೇ. what man possesses woman dispossesses.

ಏನಾದರೂ ಆಗಲಿ, ರಾತ್ರಿ ನಿದ್ದೆಯಿಲ್ಲದ್ದರಿಂದ ಬೆಳಿಗ್ಗೆ ಒಂಬತ್ತು ಗಂಟೆಗೆ ಎದ್ದರಾಯಿತೆಂದೂ ಯಾರು ಬಂದರೂ ನನ್ನ ನಿನ್ನ ನಿದ್ರಾಭಂಗ ಮಾಡಕೂಡದೆಂದೂ ಅಧಿಕಾರಯುಕ್ತ ವಾಣಿಯಿಂದ ಹೆಂಡತಿಗೆ ಹೇಳಿ ಮಲಗಿದೆನು.

'ಸರ್, ಇದ್ದಾರೇನ್ರಿ ?'

'ಯಾರವರು ?'

'ನಾನು, ರಾಯರಿದ್ದಾರೇನ್ರಿ ?'

'ಹುಂ ಮಲಗಿದ್ದಾರೆ, ಎಬ್ಬಿಸುವ ಹಾಗಿಲ್ಲ.'

ಮೇಲಿನ ಸಂಭಾಷಣೆಯು ಎಲ್ಲಿಯೋ ದಿಗಂತದ ಮೂಲೆಯಿಂದ

ಕೇಳಬಂತು. ಹೊರಗೆ ಯಾರೋ ನನ್ನ ಹೆಂಡತಿಯೊಂದಿಗೆ ಮಾತಾಡು ತ್ತಿದ್ದರು. ಮತ್ತೆ ಸಂಭಾಷಣೆ ಮುಂದರಿಯಿತು.

"ಅತ್ಯಗತ್ಯವಾಗಿ ನೋಡಬೇಕಾಗಿದೆ. ಬಹಳ Urgent" ನನ್ನ ಹೆಂಡತಿಯು ಬಂದು

"ರೀ, ಯಾರೋ ಬಂದಿದ್ದಾರೆ!"

"ಸಾಯಲಿ."

"ಯಾರು?"

"ನೀನಲ್ಲ. ಹೊರಗೆ ಬಂದವರು!"

"ಏನಾರ ಆಗ್ಲಿ, ಅವರನ್ನು ಮಾತಾಡಸ್ರಿ, ಭಾಳ ಅರ್ಜಂಟ್ ಅಂತೆ!"

ಒಟಗುಟ್ಟುತ್ತಾ ಬಿಡಲಾರದ ಕಣ್ಣುಗಳನ್ನು ಬಿಡುತ್ತಾ ಎದ್ದು ಹೊರಗೆ ಬಂದೆನು. ಹೊರಗೆ ಬಂದಿದ್ದವರು ಅಪರಿಚಿತರು. ನಮಸ್ಕಾರ ಚಮತ್ಕಾರಗಳಾದ ಮೇಲೆ—

"ನೀವೆಯೇನು ಕೃಷ್ಣಾಚಾರ್ಯರು" ಎಂತ ಹೊಸಬರೆಂದರು.

"ಹೌದು."

"ಏನು ಇಲ್ಲ ನಿಮ್ಮ ಮೇಲೆ ಒಂದು ಸಮನ್ಸ್ ಬಂದಿದೆ. ನಿಮ್ಮ ಮೇಲೊಬ್ಬರು ೨೦೦ ರೂಪಾಯಿಗಳಿಗೆ ದಾವೆ ಮಾಡಿದ್ದಾರೆ. ಹಣವನ್ನು ಕೊಡಬೇಕು; ಇಲ್ಲವಾದರೆ ನನ್ನೊಡನೆ ಬರಬೇಕು."

ಸಿಡಿಲು ಬಡಿದ ಹೆಮ್ಮರನಂತೆ ಉರುಳುವದರಲ್ಲಿದ್ದೆನು. ಅರ್ಧಾಂಗಿಗೆ ಈಗಲೇ ಬರುವೆನೆಂದು ತಿಳಿಸಿ ಅಂಗಿ ರುಮಾಲು ಹಾಕಿಕೊಂಡು ಠಾಣೆಯ ಕಡೆಗೆ ಹೊರಟೆನು. ಬಂದ ಬೇಲಿಫ (ಅಮೀನ)ನು ನನ್ನೊಡನೆ ಮೌನ ವಾಗಿ ಹಿಂಬಾಲಿಸಿದನು. ನಾನು ಎಲ್ಲಿಯೂ ಸಾಲಮಾಡಿದವನಲ್ಲ (ಏಕೆಂದರೆ ಯಾರೂ ನನಗೆ ಸಾಲ ಕೊಡುವುದಿಲ್ಲ! ಯಾರಿಗೂ ಹೊಣೆ ಗಾರನಾದವನಲ್ಲ! (ನನ್ನ ಹೊಣೆಗಾರಿಕೆಗೆ ಯಾರೂ ಒಪ್ಪುವುದಿಲ್ಲ.) ಹಾಗಾದರೆ ಯಾವ ಹಣಕ್ಕೆ ನನ್ನ ಮೇಲೆ ದಾವೆಯಾಗಿರಬೇಕು? ಚಳಿ ಗಾಲದ ಮುದುಕಿಯಂತೆ ನಡುಗುತ್ತ ಬೇಲಿಫನನ್ನು ಸಮನ್ಸ್ ತೋರಿಸು ವುದಕ್ಕೆ ಕೇಳಿದೆನು. ಸಮನ್ಸ್‌ನಲ್ಲಿ ವಾದಿಯು ಒಬ್ಬ ಮಾರ್ವಾಡಿಯಾಗಿ

ದ್ದನು. ಪ್ರತಿವಾದಿಯ ಹೆಸರು ಕೃಷ್ಣರಾವ್ ಎಂತಲೇ ಇತ್ತು. ನನ್ನ ಹೆಸರಿನ ಹಿಂದೆ ' ಎನ್ ' ಎಂತ ಹಚ್ಚಿಕೊಳ್ಳುತ್ತೇನೆ. ಆದರೆ ಸಮನ್ಸ್‌ನಲ್ಲಿ ' ಎಮ್ ' ಎಂತ ಇತ್ತು. ಇದು ಇಂಗ್ಲೀಷಿನಲ್ಲಿ ಇದ್ದುದರಿಂದ ಒಂದುಗೆರೆ ಮಾತ್ರ ವ್ಯತ್ಯಾಸ. ದಾವೆಯ ನಕಲನ್ನು ನೋಡಿದಾಗ, ಅಲ್ಲಿ ಮಲಯ ನೂರು ಕೃಷ್ಣರಾವ್ ಎಂತ ಇತ್ತು. ಅವನು ಮಗ್ಗಲುಮನೆಯ ಗೃಹಸ್ಥ. ನನ್ನ ಕಣ್ಣುಗಳು ಕೆಂಪಗಾದವು. ಕೆರಳಿದ ಕೇಸರಿಯಂತೆ ಬೇಲಿಫನ ಕಡೆಗೆ ತಿರುಗಿದೆನು. ಅವನಿಗೂ ಸಂದೇಹವಾಯಿತು. ನನ್ನ ಹೆಸರು, ಕುಲ, ಗೋತ್ರ ಎಲ್ಲವನ್ನೂ ವಿಚಾರಿಸಿದನು. ಕೆಲಸವು ಮಿಂಚಿತೆಂದು ಹೇಳಿ ಕ್ಷಮೆಯನ್ನು ಬೇಡಿದನು. ಅದರಲ್ಲಿಯೂ ಇಂಗ್ಲೀಷಿನಲ್ಲಿ ಕ್ಷಮೆ ಬೇಡುವುದು ಬಹು ಸುಲಭ. ಎಂತಹ ಅಕ್ಷಮ್ಯ ಅಪರಾಧ ಮಾಡಿದ್ದರೂ "Sorry excuse me" ಎಂತ ಹೇಳಿದರೆ ಸಾಕು. ಬಾಯಿಗೆ ಬೀಗ ಹಾಕಿಕೊಳ್ಳಬೇಕಾಗುತ್ತೆ. ಅವನೂ ಹಾಗೆಂಯೇ ಹೇಳಿ ನನ್ನ ಕೋಪಾ ನಲವು ಭುಗಿಲೆಂದು ಹೊತ್ತುವುದರಲ್ಲಿಯೇ ಮಾಯವಾದನು

ಎದ್ದ ಗಳಿಗೆಯನ್ನು ಶಪಿಸುತ್ತಾ ಮನೆಗೆ ಸಾಗಿದೆ. "ಕಾಫೀನಾರಿ ತೊಗೊಂಡು ಬಾ" ಎಂತ ಹೆಂಡತಿಗೆ ಹೇಳಿದೆ.

"ಸುಡುಗಾಡು ಹಾಲಿನಾಕಿ ಇನ್ನೂ ಬಂದಿಲ್ಲ. ನೀವೇ ಹೋಗಿ ತೊಗೊಂಡು ಬರ್ರಿ. ಹಂಗೇ ಸಿಲ್ಕ್ ಸೀರಿ ಕೈಯಾಗೆ ಹಿಡಕೊಂಡು ಬರ್ರಿ."

ಹೇಗಿದೆ? ನಾನೇ ಹೋಗಿ ಹಾಲುತಂದೆ. ಕಾಫಿಯ ಪ್ರಕರಣವು ಸಮಾಪ್ತಿಯಾಯಿತು.

ಕಾಯಿಪಲ್ಯ ತರಲು ಪೇಟೆಗೆ ಹೋದೆ. ನನ್ನ ಹಳೆಯ ಮಿತ್ರ (ಕರ್ನಾಟಕದಲ್ಲಿ ದುಡಿಯಲಾಗದೆ ಮುಂಬೈಯಲ್ಲಿ ೫೫ ರೂಪಾಯಿ ಸಂಬಳ ತೆಗೆದುಕೊಳ್ಳುತ್ತಾನೆ) ಮೂರ್ತಿಯು ಸಿಕ್ಕನು ಅವನೊಂದಿಗೆ ಹಾಗೆಯೇ ಹೊರಟೆ, ಕಾಯಿಪಲ್ಯ ತೆಗೆದುಕೊಳ್ಳುವುದು ಮರೆತುಹೋಯಿತು. ಅವನ ಮನೆಯಲ್ಲಿ ಕಾಫಿಯಾಯಿತು. ಭವ್ಯ ಮುಂಬೈ ನಗರದ ವರ್ಣನೆಯನ್ನು ಅವ್ಯಾಹತವಾಗಿ ನಡೆಯಿಸಿದ್ದ. ಹಿಂದಿನ ರಾತ್ರಿ ನಿದ್ರೆಯಿಲ್ಲದೆ, ಮೂರ್ತಿಯ ಉಪನ್ಯಾಸವು ಸ್ವಾತಿ ಮಳೆಯ ಹಾಗೆ ಜಡಿ ಮಳೆಯಾದ್ದರಿಂದ ಬಹು ಬೇಸರವೆನಿಸಿತು. ಅವನಿಂದ ಬಿಡುಗಡೆ ಹೊಂದಿಬರುವುದೇ ದುಸ್ತರ

ವಾಯಿತು. ಸುಮಾರು ೧೨ ಗಂಟೆಯಾಗಿರಬಹುದು. ಎಷ್ಟಾದರೂ ಆಗಲಿ ಅವನಿಂದ ಪಾರಾದೆನೆನ್ನುವ ಸಂತೋಷವಾಯಿತು.

ಮನೆಗೆ ಬರುತ್ತಲೆ ನನ್ನ ಹಿರಿಯ ಮಗ ಶೀನನು (ಅವನೊಬ್ಬ under graduate- IV Form ನಲ್ಲಿ ಓದುತ್ತಾನೆ) ಒಂದು ಚೀಟಿಯನ್ನು ಕೊಟ್ಟು 'ಅಪ್ಪಾ ನ್ಯಾನು ರಜಕ್ಕೆ ಬರೆದುಕೊಂಡಿದ್ದೇನೆ ಶಾಲೆಗೆ, ಇದು ಸರಿಯಾಗಿದೆಯೇ?' ಎಂತ ಹೇಳಿದ. ನನ್ನ ಹೆಂಡತಿ ಬಹಿಷ್ಟೆಯಾದಕ್ಕೆ ೩ ದಿನಗಳಿಗೆ ರಜಾ ಬರೆದುಕೊಂಡಿದ್ದ!

ಹಠಾತ್ತಾಗಿ ನೆಲ ಕುಸಿದರೂ, ಆಕಾಶ ಕಳಚಿದರೂ ನನಗೆ ಇಷ್ಟು ದಿಗ್ಭ್ರಮೆಯಾಗುತ್ತಿರಲಿಲ್ಲ. ೧೨ ಗಂಟೆಯಾಗಿದೆ; ಇನ್ನು ಮೇಲೆ C. M. G. ಆಗಬೇಕು (Cook master general) ಅಡಿಗೆಗೆ ಒಲೆ ಹೊತ್ತಿಸಬೇಕು. ಶೀನನು ಅಡಿಗೆಯನ್ನು ಬಿಟ್ಟು ಎಲ್ಲವನ್ನೂ ಮಾಡುತ್ತಾನೆ. ಒಳಗೆ ಹೋದೊಡನೆಯೇ ಅಶರೀರ ವಾಕ್ಯ ಕೇಳಿ ಬಂತು. 'ನೀವೇನು ಪಟ್ಟಾಗಿ ಹೋಟ್ಲಾಗೆ ತಿಂದಿರ್ತೀರಿ. ಮನ್ಯಾಗೆ ಇದ್ದವರೆ ಸಾಯೋರು!' ಇದು ನನ್ನ ಹೆಂಡತಿಯ ಧ್ವನಿ. ಅಟ್ಟದ ಮೆಟ್ಟಲ ಮೂಲೆಯಲ್ಲಿ ಅವಳಿಗೆ ಈಗ ಸ್ಥಳ. ಅಡಿಗೆಯ ಮನೆಗೂ ಅಟ್ಟದ ಮೂಲೆಗೂ ದೂರವಾಗುವುದೆಂದು ಅವಳು ಸ್ವಲ್ಪ ದೊಡ್ಡ ಧ್ವನಿಯಿಂದಲೇ ಮಾತನಾಡುತ್ತಾಳೆ. ಇದಕ್ಕೆ ನಾನೇನೂ ಉತ್ತರ ಕೊಡಲಿಲ್ಲ.

ಒಂದು ಸಾರಿ ನನ್ನ ಮಿತ್ರರೊಬ್ಬರು ಕೇಳಿದರು. 'ಏನ್ರಿ, ನಿಮ್ಮಲ್ಲಿ ರೇಡಿಯೋ ಅದೇನು?'

'ಹುಂ, ಅದು ನಮ್ಮ ಮಾವನವರು ಕೊಟ್ಟದ್ದು' ಎಂತ ಹೇಳಿದೆ.

ಮಗ್ಗಲು ಮನೆಯ ವಿಮಲಾಯಿಯು, "ಈ ಪ್ರಾಣಿ ಉಪವಾಸ ಸಾಯುತ್ತದೆ" ಎಂತ ಹೇಳಿ ನನ್ನ ಹೆಂಡತಿಗೆ ಮೊಸರೂ ಅವಲಕ್ಕಿ ಹಾಕಿದ್ದರಂತೆ. ಅದನ್ನು ಅವಳು ಹೊಡೆದು ಗೊರಕೆ ಹೊಡೆಯುತ್ತಾ ಮಲಗಿದ್ದಳು. ಮಧ್ಯಾಹ್ನದ ಊಟವು ೩ ಗಂಟೆಗೆ ಮುಗಿಯಿತು; ಮತ್ತು ೪|| ಗಂಟೆಗೆ ಕಾಫಿ ತೀರಿತು.

ಹವಾಯಾತ್ರೆಗೆ ಹೊರಟೆ, 'ನೀವು ಇವತ್ತು ರಾತ್ರಿ ಸಿನಿಮಾಕ್ಕೆ ಹೋಗಿ ಕೂತುಕೋ ಬ್ಯಾಡ್ರಿ. ಪ್ಯಾಟ್ಯಾಗ ಹೋಗ್ತಿರೇನೋ? ಹಂಗಾರೆ

ಸಿಲ್ಕ್ ಸೀರೆ ಕೈಯಾಗೆ ಹಿಡಕೊಂಡು ಬರ್ರಿ!" ಮಗ ಶೀನ ಬರೆದ ಹಾಗೆ ನಾನೂ ರಜಕ್ಕೆ ಬರೆದುಕೊಂಡೆ ಮೂರು ದಿವಸಗಳಿಗೆ. ಪೇಟೆಯಲ್ಲಿ ಒಂದು ಗ್ರಾಮಾಫ್ರೋನ್ ರಿಕಾರ್ಡ್ ನನ್ನನ್ನು ಆಕರ್ಷಿಸಿತು. ನನ್ನ ಭಾವನೆಯ ತಂತುವನ್ನು ಮೀಟಿತು. ಅದನ್ನು ಕೊಂಡುಕೊಂಡೆ. ಮನೆಗೆ ಬಂದವನೆ ಆ ರಿಕಾರ್ಡು ಹಾಕಿದೆ.

"ಹೆಂಡತಿ, ಪ್ರಾಣ ಹಿಂಡುತಿ!"

ಸಾಕು ಈ ಭಾನುವಾರ.

---

# ಮುನ್ನುಡಿಗಳು

ಮುನ್ನುಡಿ ವ್ಯಾಧಿಯು ಇತ್ತೀಚೆಗೆ ಬಹಳವಾಗಿ ಹಬ್ಬಿ ಅದೊಂದು ಸಾಂಕ್ರಾಮಿಕ ರೋಗವೋ ಎಂಬ ದಿಗಿಲು ನನಗುಂಟಾಗಿದೆ. ಸುಮಂಗಲಿಗೆ ಮಂಗಳಸೂತ್ರವು ಹೇಗೋ ಪುಸ್ತಕಕ್ಕೆ ಮುನ್ನುಡಿಯು ಹಾಗಿದೆ. ಅದಿಲ್ಲ ದಿದ್ದರೆ ಪುಸ್ತಕವು ಏನೋ ಒಂದು ತರಹೆ ಬಿಕೋ ಅನ್ನುತ್ತೆ. ಈ ಮುನ್ನುಡಿ ಹಾಕಿಸುವುದರಲ್ಲಿಯೂ ಒಂದು ರೀತಿಯ ರಾಜಕಾರಣ ಅಡಕವಾಗಿದೆ. ನೌಕರಿ ಬೇಟೆಗೆ ಹೊರಟವನು ಶಿಫಾರಸು ಪತ್ರಗಳೆಂಬ ಅಸ್ತ್ರಗಳಿಂದ ಸಜ್ಜಿತ ನಾಗಿ ಹೇಗೆ ಹೊರಡುತ್ತಾನೋ ಹಾಗೆ ಗ್ರಂಥಕಾರನು 'ದೊಡ್ಡವ'ರೊಬ್ಬರ ಮುನ್ನುಡಿಯೊಡನೆ ಪುಸ್ತಕ ಮಾರಾಟಕ್ಕಾಗಿ ಪೇಟೆಗೆ ತೆರಳುತ್ತಾನೆ. ಈ ದೊಡ್ಡವರ ಕೊಡಲಿ ಗುರುತೊಂದಿದ್ದರೆ ತನ್ನ ಪ್ರತಿಗಳನ್ನು ಬಿಸಿದೋಸೆಗಳಂತೆ ಬಹು ಸುಲಭವಾಗಿ ಮಾರಬಹುದೆಂದು ತಿಳಿದಿರುತ್ತಾನೆ.

ನನ್ನ ವೈಯ್ಯಾಕರಣೀಯ ಮಿತ್ರರೊಬ್ಬರು ಮುನ್ನುಡಿಯನ್ನು ಮುದ್ + ನುಡಿ = ಮುನ್ನುಡಿ, ಅಂತ ಪದವಿಭಾಗಮಾಡಿದ್ದಾರೆ. ಇದು ಸರಿಯೇ. ಏಕೆಂದರೆ ಏನೋ ಮುದ್ದುಮುದ್ದಾಗಿ ಅಥವಾ ಮುದ್ದೆಮುದ್ದೆ ಯಾಗಿ ಬರೆದುಕೊಂಡಿದ್ದಾರೆಂದು ನಾವು ಬಹು ಸುಲಭವಾಗಿ ಅರ್ಥಮಾಡಿ ಕೊಳ್ಳಬಹುದು.

ಅನೇಕ ಸಂದರ್ಭಗಳಲ್ಲಿ ಈ ಮುನ್ನುಡಿಗಳು "ಅಶ್ವತ್ಥಾಮ ಹತಃ ಕುಂಜರಃ" ಆಗಿರುತ್ತೆ. ಅಂದರೆ ಮನಸ್ಸಿಲ್ಲದಿದ್ದರೂ ಏನನ್ನೋ ಅಸ್ಪಷ್ಟ ವಾಗಿ ಇತರರಿಗೆ ತಿಳಿಯದಂತೆ ಹೇಳುವುದು. ಬರೆದಿರುವ ಪುಸ್ತಕ ಕಗ್ಗ ವೆಂದು ಆತ್ಮಸಾಕ್ಷಿಯಾಗಿಯೂ ತಿಳಿದಿದ್ದರೂ, ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಮುನ್ನುಡಿ ಬರೆಯಲೊಪ್ಪಿದ ತಪ್ಪಿಗೆ, ಕಾಟಚಾರಕ್ಕಾಗಿ, ಜಾರಿಸಿ, ಇಳಿ ಜಾರಿಸಿ, ತೇಲಿಸಿ ಕೊನೆಗೆ ತಮ್ಮ ಕೊಡಲಿ ಗುರುತನ್ನು ಹಾಕುತ್ತಾರೆ.

ಮುನ್ನುಡಿಯಲ್ಲಿ ಹೊಗಳಲ್ಪಟ್ಟಿರುವ ಗ್ರಂಥಕಾರನ ಸರಳಶೈಲಿ, ವಿಚಾರಪ್ಲವಪೂರಿತವಾದ ವಿಷಯಗಳು, ಹೃದಯಂತರಾಳದಲ್ಲಿ ಅಡಗಿರುವ ಭಾವನೆಗಳನ್ನು ಬಡಿದೆಬ್ಬಿಸುವ ಸಮಯ ಸನ್ನಿವೇಶ, ಇತ್ಯಾದಿಗಳು ಅಲ್ಲಿ ಇರುವುದೇ ಇಲ್ಲ. ಇಂತಹ ಸಂದರ್ಭದಲ್ಲಿ ಈ ಅಂಶಗಳನ್ನು ತೋರಿಸಿ ಕೊಟ್ಟವರಿಗೆ ೧೦೦ ರೂಪಾಯಿ ಬಹುಮಾನ ಕೊಡುವುದಾಗಿ 'ತಂದೆನಾಡು' ಪತ್ರಿಕೆಯಲ್ಲಿ ಒಂದು ಜಾಹೀರಾತು ಕೊಡಬೇಕೆಂತ ಮನಸ್ಸಾಗುತ್ತದೆ.

ಗ್ರಂಥಕ್ಕಾಗಿ ಮುನ್ನುಡಿಯೋ ಅಥವಾ ಮುನ್ನುಡಿಗಾಗಿ ಗ್ರಂಥವೋ ಎಂಬುದು ಬೀಜವೃಕ್ಷ ಅನ್ಯಾಯದಂತೆ. ಕೆಲವು ಸಾರಿ ಪುಸ್ತಕ ಚಿಕ್ಕದಾಗಿದ್ದರೂ ಮುನ್ನುಡಿ ಬಹಳ ದೊಡ್ಡದಾಗಿರುತ್ತೆ. "ಅಯ್ಯ ಅಡೀ ನೇರಾದರೆ, ಲಿಂಗ ಪಂಚೇರು" ಎನ್ನುವಂತೆ ಮುನ್ನುಡಿಯೇ ಪುಸ್ತಕಕ್ಕಿಂತ ದೊಡ್ಡದಾಗಿದ್ದು ಓದುಗರನ್ನು ಆಶ್ಚರ್ಯಸಾಗರದಲ್ಲಿ ಮುಳುಗಿಸುತ್ತೆ. ನಿಮಗೆ ತಿಳಿದಿರುವ ಹಾಗೆ ಇದು ಕವಿಯುಗ ಬಿಳಿಯ ಹಾಳೆಗಳ ಶೀಲಭಂಗ ಮಾಡಬಲ್ಲವರೆಲ್ಲ ಕವಿಗಳೇ ಮೊಟ್ಟಮೊದಲನೆಯದಾಗಿ ಅವರು ಸಾಹಿತ್ಯ ರಂಗ ಪ್ರವೇಶಿಸುವುದು ಕವಿತೆಗಳ ಮೂಲಕವೆ. ನನ್ನ ಮಿತ್ರರೊಬ್ಬರು,

ಗ್ರಂಥಕೆ ಮುನ್ನುಡಿಯೊ ಮುನ್ನುಡಿಗೆ
ಗ್ರಂಥವೊ ನೀ ಹೇಳೊ ಪುರಂದರ ವಿಠಲಾ ||

ಎಂಬ ಕವಿತೆಯನ್ನು ರಚಿಸಿ ಪುರಂದರ ದಾಸರನ್ನು ಅಣಗಿಸುವ ಸಾಹಸ ಮಾಡಿದ್ದಾರೆ

ಸಾಮಾನ್ಯವಾಗಿ ಹೆಸರು ಹೊಂದಿದ ಸಾಹಿತಿಗಳೊಬ್ಬರಿಂದ ಗ್ರಂಥಕ್ಕೆ ಮುನ್ನುಡಿ ಬರೆಸುವುದು ಪರಿಪಾಠವಾಗಿದೆ. ಆದರೆ ಈ ಸಾಹಿತಿಗಳು ಮುನ್ನುಡಿ ಬರೆಯಬೇಕೆಂಬ ಗ್ರಂಥಕಾರನ ಬೇಡಿಕೆಯನ್ನು ಬಹಳ ದಿನ ಗಳಿಂದ ತಳ್ಳುತ್ತ ಬಂದಿರುತ್ತಾರೆ. ಮಗನ ಮುಂಜಿ, ಮಗಳ ಮದುವೆ, ಹೆಂಡತಿಯ ಟೈಫಾಯ್ಡ್ (ಈ ಕಾಹಿಲೆ ಹೇಳಿದಲ್ಲಿ ೨೨ ದಿನಗಳು ಅಥವಾ ಅದಕ್ಕೂ ಮೇಲ್ಪಟ್ಟ ದಿನಗಳ ಅವಧಿ ತೆಗೆದುಕೊಳ್ಳಬಹುದು.) ಮುಂತಾದ ನೆಪಗಳನ್ನು ಒಡ್ಡಿ ಬರೆಯದೆ ತಪ್ಪಿಸಿಕೊಂಡಿರುತ್ತಾರೆ. ಗ್ರಂಥಕಾರನಿಗೆ ಇದಕ್ಕೆ ಚಿಕಿತ್ಸಾಕ್ರಮವೂ ಗೊತ್ತಿರುತ್ತೆ. ಅಗಲವಾದ ನಗೆ ನಗುತ್ತಾ, ಮುಖದ ಮೇಲಿರುವ ಮಾಂಸಖಂಡಗಳಿಗೆ ಕಸರತ್ತುಮಾಡಿಸಿ, ಮುಖದ

ಅಂಗಾಂಗಗಳು ವಿಕಾರವಾಗುವಂತೆ ಮಾಡಿ ಹಳೆಯ ಹರಕುಕೋಟಿನ ಒಳಜೇಬಿನಿಂದ ತಾನೇ ಮನೆಯಲ್ಲಿ ಬರೆದುಕೊಂಡು ಬಂದಿರುವ ಮುನ್ನುಡಿಯನ್ನು ಅವರ ಮುಂದಿರಿಸಿ ಆರು ಗಜ ಹಿಂದೆ ಸರಿದು ಮುಖ್ಯಪ್ರಾಣನಂತೆ ಕರಜೋಡಿಸಿ, ಶಿರಬಾಗಿಸಿ ನಿಲ್ಲುತ್ತಾನೆ ಆ ಸಾಹಿತಿ ಆ ಮುನ್ನುಡಿಗೆ ಅರ್ಥಗರ್ಭಿತ ನಗುನಗುತ್ತ ತನ್ನ ಕೊಡಲಿ ಗುರುತು ಹಾಕುತ್ತಾನೆ.

ಕೆಲವು ಸಂದರ್ಭಗಳಲ್ಲಿ ಮುನ್ನುಡಿಕಾರನಿಗೂ ಗ್ರಂಥಕಾರನಿಗೂ ಪರಿಚಯವೇ ಇರುವುದಿಲ್ಲ. ಸರಿ. ಗ್ರಂಥಕಾರ ಒಬ್ಬ ಮಧ್ಯಸ್ಥಗಾರನನ್ನು ಪತ್ತೆಹಚ್ಚಿ ಅವನ ನೆರವಿನಿಂದ ಮುನ್ನುಡಿಕಾರ ಗ್ರಂಥಕ್ಕೆ ಮುನ್ನುಡಿ ಬರೆಯಲೊಪ್ಪುವಂತೆ ಮಾಡುತ್ತಾನೆ. ಮುನ್ನುಡಿಯಲ್ಲಿ "ಗ್ರಂಥಕಾರರ ಪರಿಚಯ ನನಗೆ ಅನೇಕ ವರ್ಷಗಳಿಂದ ಇದೆ. ಅವರು ಇಂತಹ ಉತ್ತಮ ಗ್ರಂಥ ಬರೆಯುವ ಯೋಗ್ಯತೆ ಉಳ್ಳವರೆಂದು ನನಗ ತಿಳಿದಿರಲೇ ಇಲ್ಲ. ಇದೊಂದು ದೊಡ್ಡ ಅಚ್ಚರಿ" ಅಂತ ಬರೆದಿರುತ್ತಾರೆ. ಅದನ್ನು ಓದುವವರಿಗೂ ಅದೊಂದು ಅಚ್ಚರಿಯೇ!

ಮುನ್ನುಡಿ ಬರೆಯಲು ಹಾತೊರೆಯುತ್ತಿರುವ ಮಹನೀಯರು ನಮ್ಮಲ್ಲಿ ಬೇಕಾದಷ್ಟು ಜನರಿದ್ದಾರೆ. ಬರೆಯುವುದಕ್ಕೆ ಅವಕಾಶ ಸಿಕ್ಕಿತೆಂದು ಸ್ವಪ್ರಶಂಸೆಗೆ ಆರಂಭಿಸಿ ಬಿಡುತ್ತಾರೆ. ತಾವು ನೋಡಿದ ದೊಡ್ಡ ಮನುಷ್ಯರು, ಓದಿದ ಅಥವಾ ಓದದೆ ಇರುವ ಉದ್ಗ್ರಂಥಗಳ ಪಟ್ಟಿ, ತಾವು ಬರೆದಿರುವ ಅಥವಾ ಬರೆಯಬೇಕೆಂದಿರುವ ಪುಸ್ತಕಗಳ ಲಿಸ್ಟು ಮುಂತಾದವುಗಳ ವಿವರಣೆಯನ್ನೇ ತುಂಬಿಸಿ ಬಿಡುತ್ತಾರೆ ಅದರಲ್ಲಿ ಯಾವ ಪುಸ್ತಕಕ್ಕೆ ಮುನ್ನುಡಿ ಬರೆಯಬೇಕಾಗಿತ್ತೋ ಅದರ ವಿಷಯವಾಗಿ ಒಂದಕ್ಷರವನ್ನೂ ಬರೆದಿರುವುದಿಲ್ಲ

ಉಪಾಧ್ಯಾಯನೊಬ್ಬನು ತನ್ನ ಹಳೆಯ ವಿದ್ಯಾರ್ಥಿಯೊಬ್ಬನಿಗೆ ಅನಿವಾರ್ಯವಾಗಿ ಹೇಳುವ ಒಂದೆರಡು ಒಳ್ಳೆಯ ಮಾತುಗಳಿದ್ದಂತೆ ಇರುತ್ತೆ ಇವುಗಳ ಧಾಟಿ.

ಗ್ರಂಥಕಾರನು ಕೆಲವು ಸಾರಿ ತನ್ನ ಪುಸ್ತಕದಲ್ಲಿ ತಾನೇ ಮುನ್ನುಡಿ ಬರೆದುಕೊಂಡಿರುತ್ತಾನೆ. ಅದರಲ್ಲಿ ಅವನ ಊರಿನ ಮಹನೀಯರೊಬ್ಬರು (ಅವನ ಕಾಟ ತಡೆಯಲಾರದೆ) ಪುಸ್ತಕ ಪ್ರಕಟಣೆಗಾಗಿ ೫೦ ರೂಪಾಯಿ

ಗಳನ್ನು ಉದಾರ (?) ಹೃದಯದಿಂದ ಕೊಟ್ಟ ವಿಷಯ, ಮುದ್ರಣಕಾರನ ಕೆಲಸ, ಈ ಪುಸ್ತಕ ಓದಿದ ಮಹಸೀಯರು ಉತ್ತೇಜನಕೊಟ್ಟಲ್ಲಿ ಇನ್ನೂ ಕೆಲವಾರು ಪುಸ್ತಕಗಳನ್ನು ಬರೆಯುವ ಸೂಚನೆಯ ಬೆದರಿಕೆ ಇತ್ಯಾದಿಗಳನ್ನು ಬರೆದುಕೊಂಡಿರುತ್ತಾನೆ.

ಸರ್ಕಾರದವರು ಮುನ್ನುಡಿ ಘತೋಟಿ ಆಜ್ಞೆ (ಕಂಟ್ರೋಲ್ ಆರ್ಡರ್) ಯನ್ನು ಜಾರಿಗೆ ತಂದು ಇದು ಇಂದಿನ ಯುದ್ಧ ಸಮಯದಲ್ಲಿಯೂ ಅಲ್ಲದೆ ಮುಂದಿನ ಅಂಚಿ ಯುದ್ಧ ಸಮಯ (Post War Period) ದಲ್ಲಿಯೂ ಅನ್ವಯಿಸುವಂತೆ ಮಾಡಬೇಕು.

ಗ್ರಂಥಕಾರನು ತಾನು ಬರೆದುಕೊಂಡಿರುವ ಮುನ್ನುಡಿಯಲ್ಲಿ ಆ ಗ್ರಂಥವನ್ನು ಬರೆಯಲು ಕಾರಣ, ಗ್ರಂಥದಲ್ಲಿ ಅಳವಡಿಸಲ್ಪಟ್ಟಿರುವದೆಂದು ಭಾವಿಸಿರುವ ವಿಷಯಗಳ ವಿಹಂಗಮಾವಲೋಕನ ಮುಂತಾದವನ್ನು ಬರೆದಿರುತ್ತಾನೆ ಆತ ಆ ರೀತಿ ಬರೆಯದಿದ್ದರೆ ಜನಕ್ಕೆ ತಿಳಿಯುವುದಾದರೂ ಹೇಗೆ? ಆ ವಿಷಯಗಳು ಆ ಪುಸ್ತಕದಲ್ಲಿ ಪ್ರತಿಪಾದಿತವಾಗಿಲ್ಲದಿರುವುದೇ ಬಹಳ ಸ್ವಾರಸ್ಯ ಸಂಗತಿ

ಕರಡುಪ್ರತಿ ಓದಿದವರ ಪಟ್ಟಿ, ಸ್ಫೂರ್ತಿಕೊಟ್ಟವರ ಸಹಸ್ರನಾಮ, ಇವನು ರಾತ್ರಿ ಪುಸ್ತಕ ಬರೆಯುವದರಲ್ಲಿ ತೊಡಗಿದ್ದಾಗ ಇವನ ಹೆಂಡತಿ ನಿದ್ರೆಗೆಟ್ಟ ವಿಷಯ ಮುಂತಾದ ಖಾಸಗಿ ಸಂಗತಿಗಳನ್ನು ಸಹ ನಿರ್ದಾಕ್ಷಿಣ್ಯವಾಗಿ ಹೇಳಿಕೊಂಡಿರುತ್ತಾನೆ.

ಈ ಮುನ್ನುಡಿ ಹಾವಳಿಯು ಬರೆ ಗ್ರಂಥರಚನೆಯ ಕ್ಷೇತ್ರಕ್ಕೆ ಮಾತ್ರವೇ ಮೀಸಲಾದುದಲ್ಲ. ಇದು ಜೀವನದ ಬೇರೆ ಬೇರೆ ರಂಗಗಳಲ್ಲಿಯೂ ಬೇರೆ ಬೇರೆ ರೂಪಗಳಲ್ಲಿಯೂ ವಿಜೃಂಭಿಸುತ್ತಿದೆ. ಉಪನ್ಯಾಸ ಕ್ಷೇತ್ರದಲ್ಲಂತೂ ಇದರ ಹಾವಳಿ ಹೇಳತೀರದು. ಒಬ್ಬ ಹೆಸರಾಂತ ಭಾಷಣಕಾರರನ್ನು ಕರೆಯಿಸುತ್ತಾರೆ ಆತನು ಮಾಡುವ ಭಾಷಣದ ವಿಷಯ ಮುಂತಾದವು ಮುಂಚಿತವಾಗಿಯೇ ಅಚ್ಚಾಗಿ ಪ್ರಕಾಶನವಾಗಿರುತ್ತವೆ. ಅಂದಿನ ಸಭೆಗೆ ಇಂತಹರೇ ಅಧ್ಯಕ್ಷರಾಗಬೇಕೆಂದು ನಿರ್ಧರವಾಗಿರುತ್ತದೆ. ಆದರೂ ಕಾರ್ಯದರ್ಶಿ ಮುನ್ನುಡಿಗಾರಂಭಿಸಿ ಎಲ್ಲರಿಗೂ ತಿಳಿದ ವಿಷಯಗಳನ್ನು ವಿವರಿಸುತ್ತಾನೆ. ಅಧ್ಯಕ್ಷರ ಅಸಮರ್ಥತೆ, ಅಯೋಗ್ಯತೆ (ಇವು

ಸಹ ಎಲ್ಲರಿಗೂ ತಿಳಿದಿರುತ್ತವೆ!)ಗಳನ್ನು ವಿವರಿಸುತ್ತಾನೆ. ಮತ್ತೆ ಒಬ್ಬಿಬ್ಬರು, ಭಾಷಣಕಾರನು ಹೇಳಿದ ವಿಷಯಗಳನ್ನು ಮುನ್ನುಡಿಯಲ್ಲಿ ಬೇಡವೆಂದರೂ ಹೇಳಿಯೇ ಬಿಡುತ್ತಾರೆ.

x x x x

ಮೊದಲಿಗೆ ನಾಟಕಗಳಲ್ಲಿ ಈ ಮುನ್ನುಡಿ ಕೆಲಸವನ್ನು ನಟಿ ಸೂತ್ರ ಧಾರರು ವಹಿಸಿಕೊಂಡಿದ್ದರು ಆದರೆ ಈಗ ಅವರ ಪೀಡೆ ತಪ್ಪಿದೆ. ಏಕೆಂದರೆ ನಾಟಕ ಕಂಪನಿಗಳು ಮುಳುಗಿಹೋಗಿವೆ. ಅದರ ಹಿಂದೆಯೇ ನಟಿ ಸೂತ್ರ ಧಾರರು ತೇಲಿಹೋಗಿದ್ದಾರೆ. ಎಂತಲೋ ಏನೋ ನಾಟಕಕಾರರೂ ಕೂಡಾ ಮುನ್ನುಡಿ ಬರೆದು, ಬರೆಸಿ ಅಥವಾ ತಾವೇ ಬರೆದು ಬರೆಸಿದಹಾಗೆ ಮಾಡಿ, ನಟಿ ಸೂತ್ರಧಾರರಿಂದ ಹೇಳಿಸಬೇಕಾದ್ದನ್ನೆಲ್ಲಾ ಹೇಳಿ, ಪುಸ್ತಕ–ನೋಟ ಕರ ಗ್ರಹಚಾರ ಬಿಡಿಸುತ್ತಾರೆ.

x x x x

ಇನ್ನು ಕವಿತೆಗೆ ಕವಿಯು ಮುನ್ನುಡಿ, ಕಥೆಗೆ ಕಥೆಯು ಮುನ್ನುಡಿ, ಕಾದಂಬರಿಗೆ ಕಾದಂಬರಿಯದೆ ಮುನ್ನುಡಿ – ಜೀವನ ಚರಿತ್ರೆಗೆ, ಸ್ವ ಅಥವಾ ಪರಜೀವನ ಚರಿತ್ರೆಯು ಮುನ್ನುಡಿ – ಹಾಗೇ ಮುನ್ನುಡಿಯು ಕುಲಕ್ಕೆ ಕೋಟಿ ಸಂತಾನ; ಆದರೆ ಬಣ್ಣಿಸಲು ವ್ಯವಧಾನವೆಲ್ಲಿ? ಆದ್ದರಿಂದ ಸಧ್ಯಕ್ಕಿಷ್ಟು ಸಾಕು.

---

# ವಿಮಾ ಪ್ರಪಂಚ

ಎಲ್ಲ ದೇಶಗಳಂತೆಯೇ ನಮ್ಮ ದೇಶದಲ್ಲೂ ವಿಮಾ ಕಂಪನಿಗಳಿವೆ. ಮರಣವಾದರೆ, ಬದುಕಿದ್ದರೆ, ಉಪನಯನವಾದರೆ, ಲಗ್ನವಾದರೆ, ನಿಷೇಕ ವಾದರೆ (?) ಮನೆಗೆ ಅಥವಾ ಅಂಗಡಿಗೆ ಬೆಂಕಿ ಹಚ್ಚಿಕೊಂಡರೆ, ನೀರಿನಲ್ಲಿ ಮುಳುಗಿದರೆ, ಅಂತೂ ಎಲ್ಲ ಪ್ರಕರಣಗಳಿಗೂ ವಿಮೆ ಇಳಿಸಬಹುದು. ಇಷ್ಟಾದರೂ ಭಾರತೀಯರು ಮಾತ್ರ ವಿಮೆಯ ವಿಷಯದಲ್ಲಿ ಪಾಶ್ಚಾತ್ಯ ರಷ್ಟು ಸುಧಾರಿಸಿಲ್ಲವೆಂದು ಕೈ ಎತ್ತಿ ಹೇಳಬಹುದು. ಅಲ್ಲಂತು, ಮೊಳಕೈ, ಅಂಗಾಲು, ತೊಡೆ, ಹಲ್ಲು, ಧ್ವನಿ, ಕನ್ನಡಕ ಮುತ್ತು ತಮ್ಮಲ್ಲಿಲ್ಲದ ಅಂಗ ಗಳಿಗೂ (?) ಮನೆಯಲ್ಲಿಲ್ಲದ ಸಾಮಾನುಗಳಿಗೂ ವಿಮೆ ಇಳಿಸುತ್ತಾರೆ.

ನನ್ನ ಸ್ನೇಹಿತನು ಬಹು ಒತ್ತಾಯಪಡಿಸಿದುದರಿಂದ ನಮ್ಮ ಅಜ್ಜಿಯ "ಮರಣಕ್ಕೆ" ಒಂದು ಡಿಬೆಂಚರ್ ಬಾಂಡನ್ನೂ ಇನ್ನೊಂದು ಕಂಪನಿ ಯಲ್ಲಿ ಒಂದು ಪಾಲಿಸಿಯನ್ನೂ ತೆಗೆದುಕೊಂಡೆನು. ಆದರೆ ಈ ವಿಷಯ ನಮ್ಮ ವೆಂಕಜ್ಜಿಗೆ (ಮೇಲೆ ಹೇಳಿದ ನಮ್ಮಜ್ಜಿ) ತಿಳಿದ ಕೂಡಲೇ ಆ ಮುದು ಕಿಯು ಹದ್ದಿಗಿಂತ ಹೆಚ್ಚು ವಯಸ್ಸಾಗಿದ್ದರೂ ಸಾಯುವ ಹವ್ಯಾಸವನ್ನೇ ಬಿಟ್ಟು ತನ್ನ ನಿಷೇಧವನ್ನು ಸೂಚಿಸುವುದಕ್ಕಾಗಿ ಹೋದ ಸೋಮವಾರ ಶತಮಾನೋತ್ಸವವನ್ನು ಮಾಡಿಕೊಂಡಳು. ನನಗೆ ಕಂತಿನ ಹಣಕಟ್ಟಿ ಸಾಕಾಗಿ ಬೇಸತ್ತು ಹಣಕಟ್ಟುವುದನ್ನು ಬಿಟ್ಟು ಪಾಲಿಸಿಗಳನ್ನು ರದ್ದುಪಡಿಸಿ ಕೊಂಡೆನು.

ಮಕ್ಕಳನ್ನು ಹೆತ್ತರೆ ಹಣ ದೊರೆಯುವದೆಂಬ ಜಾಹೀರಾತಿನ ಪತ್ರಿಕೆ ಗಳನ್ನು ನೋಡಿ ನನ್ನ ಹೆಂಡತಿಯು ಜನನಕ್ಕೆ ವಿಮೆ ಮಾಡಿಸುವುದಕ್ಕೆ ಹೇಳಿದಳು. ಅದರಂತೆ ವಿಮೆ ಇಳಿಸಿದ್ದಾಯಿತು. ವರ್ಷಾಂತ್ಯದಲ್ಲಿ ಯಥಾ ವಿಧಿಯಾಗಿ ಅವಳ ಮಕ್ಕಳನ್ನು ಹೆತ್ತಳು. ಆದರೆ ಕಂಪನಿಯವರು ಮಾತ್ರ

ಒಂದೇ ಮಗುವಿಗೆ ಹಣಕೊಟ್ಟರು. (ಆಹಾ ಏನು ಅನ್ಯಾಯ) ಕೊಟ್ಟ ಹಣವಾದರೂ ಬಾಣಂತಿತನದ ಖರ್ಚಿಗೂ ಸಾಲದಾಯಿತು ಅಲ್ಲದೆ ಪ್ರತಿ ವರ್ಷವೂ ಈ ರೀತಿ ಅವಳು ಅವಳ ಮಕ್ಕಳನ್ನು ಹೆರುವುದನ್ನೆ ಅಭ್ಯಾಸ ವಾಗಿಟ್ಟುಕೊಂಡರೆ ಮನೆಯಲ್ಲಿ ಒಂದು ಮಿಲಿಟರಿಯೇ ಆಗುವದೆಂದು ಹೆದರಿ ಪಾಲಿಸಿಯನ್ನು ರದ್ದು ಮಾಡಿಕೊಂಡೆನು.

ಇತ್ತೀಚಿನ ಖಾನೇಷುಮಾರಿ ಲೆಕ್ಕದಿಂದ ಪ್ರಜಾಸಂಖ್ಯೆಯು ಓಟವು ತ್ವರಿತದಿಂದ ಸಾಗಿರುತ್ತದೆಂದು ತಿಳಿಯಬರುತ್ತದೆ ಆದರೆ ಇದಕ್ಕೆ ಕಾರಣವು, ಜನನಕ್ಕೆ ವಿಮೆ ಇಳಿಸಿದ ಹೆಂಗಸರು, ತಪ್ಪದೆ ಮಕ್ಕಳನ್ನು ಹೆರುತ್ತಾ ಇರುವುದರಿಂದ ಪ್ರಜಾಸಂಖ್ಯೆಯು ಹೆಚ್ಚಾಗಿದೆಯೆಂದು ಸಂಶೋಧನೆಯಿಂದ ಗೊತ್ತಾಗುವುದು

ನನ್ನ ಸ್ನೇಹಿತ ಶ್ರೀನಿವಾಸರಾಯರು ಒಂದು ವಿಮಾ ಕಂಪನಿಯ ಏಜಂಟರು ಯಾವಾಗಲೂ ಅವರು "ವಿಮಾ" ಎನ್ನುವ ಶಬ್ದವನ್ನು ಮಂತ್ರರೂಪವಾಗಿ ಪಠಿಸುತ್ತಿದ್ದರು ಮತ್ತು ಅವರ ಹೆಣ್ಣು ಮಗುವಿಗೆ "ವಿಮಾ" ಎಂದು ಹೆಸರಿಟ್ಟಿದ್ದರು ಆದರೆ ಆ ಹುಡುಗಿಯ ಲಗ್ನದಲ್ಲಿ ಲಗ್ನಪತ್ರಿಕೆಯನ್ನು ಬರೆಯುವಾಗ ಗೊಂದಲವೇ ಎದ್ದಿತು. ವಿಮಾದೇವಿ, ವಿಮಾಬಾಯಿ, ವಿಮಕ್ಕ ಮುಂತಾದ ಎಲ್ಲ ಹೆಸರುಗಳು ಸಮರ್ಪಕವಾಗದೆ ಕೊನೆಗೆ ವಿಮಲಾದೇವಿ ಎಂತ ಬರೆದರು. ವಿಮೆ ಎನ್ನುವ ಹೆಸರು ವಿಮಲಾ ಎನ್ನುವ ಹೆಸರಿನ ಸಂಕುಚಿತ ಶಬ್ದವೆಂದು ವಾಕ್ಯಾರ್ಥಮಾಡಿಕೊಂಡರು.

ಎದ್ದ ಕೂಡಲೇ ಬೆಕ್ಕು, ಪರಕೆ ಮತ್ತು ತಲೆಯಮೇಲೆ ಕೈ ಆಡಿಸುವವರ ದರ್ಶನವಾದರೆ ಆ ದಿವಸ ಏನೋ ಒಂದು ಕೆಡಕು ಸಂಭವಿಸುವುದೆಂದು ನಮ್ಮಲ್ಲಿ ಒಂದು ಕುರುಡು ನಂಬಿಕೆಯಿದೆ. ಆದರೆ ಇನ್ಸೂರೆನ್ಸ್ ಕಂಪನಿಯ ಏಜಂಟನ ದರ್ಶನವಾದರೆ ಆ ದಿವಸ ಏನೋ ಒಂದು ಕಂಟಕ ಇರುವುದೆಂದು ನನ್ನ ಅನುಭವಸಿದ್ಧಾಂತ. ಪಠಾಣನಾಗಲಿ, ಮಾರ್ವಾಡಿಯಾಗಲೀ, ಬೆನ್ನು ಹತ್ತಿದರೆ ಏನೋ ಸ್ವಲ್ಪ ದೈನ್ಯದಿಂದ ಹೇಳಿಕೊಂಡರೆ ಬಿಡಬಹುದು. ಆದರೆ ಈ ಏಜಂಟರು ಹಾಗಲ್ಲ ಶುಕ್ರವಾರದ ಮಾರನೆಯ ದಿನ ಇದ್ದ ಹಾಗೆ. ಈಚೆಗೆ ಇಂಡಿಯಾ ಸರಕಾರದವರು ಇನ್ಸೂರೆನ್ಸ್ ಕಂಪನಿಯ ಏಜಂಟರುಗಳೆಲ್ಲ ಲೈಸನ್ಸ್ (Licence) ತೆಗೆದುಕೊಳ್ಳ

ಬೇಕೆಂದು ನಿರ್ಬಂಧವಿಟ್ಟಿದ್ದಾರೆ. ವಿಚಾರಮಾಡಿ ನೋಡಿದುದರಲ್ಲಿ ಈ ಜನರ ದಾಳಿಗೆ ತುತ್ತಾದ ಮಹನೀಯರು ಬೇಸತ್ತು ಹೀಗೆ ಮಾಡಿದ್ದಾರೆಂದು ನನ್ನ ತರ್ಕ. ಈ ಏಜಂಟರುಗಳಿಗೆ ಬಹಳ ಸಾರಿ ಚಕ್ಕರ್ ಹೊಡೆದಿದ್ದೇನೆ ಅಕಸ್ಮಾತ್ತಾಗಿ ಮನೆಗೆ ಬಂದಾಗ ಬಾಗಿಲ ಸಂದಿಯಲ್ಲಿ ಕಿರುದನಿಯಿಂದ ಯಜಮಾನರು ಮನೆಯಲ್ಲಿಲ್ಲವೆಂತ ಹೇಳಿದ್ದೇನೆ. ಮನೆಯಲ್ಲಿ ನನ್ನ ಕುಟುಂಬಕ್ಕೂ ಇವರನ್ನು ಕಂಡರೆ ಆಗುವುದಿಲ್ಲ ಏಕೆಂದರೆ ಅವರು ತಮ್ಮ ಭಾಷಣಗಳಲ್ಲಿ ಹೇಳುವುದೇ ಹೀಗೆ "ನೋಡ್ರಿ ರಾಯರೆ, ನಮ್ಮ ಈ – ಇನ್ಸೂರೆನ್ಸ್ ಕಂಪನಿಯಲ್ಲಿ ನೀವು ಕೊಟ್ಟ ಹಣದ ಹತ್ತು ಪಾಲು ನಿಮಗೆ ತಿರುಗುತ್ತದೆ. ಅಲ್ಲದೆ ಮೊದನೆಯ ಸಾರಿ ನೀವು ಕಂತು ಕಟ್ಟಿ ಮರಣ ಹೊಂದಿದರೆ ಪೂರ್ತಾ ಹಣವನು ಕೊಡುತ್ತೇವೆ" ಜೀವದಿಂದ ಇರುವದಕ್ಕಿಂತ ಸಾಯುವುದರಲ್ಲಿಯೇ ಹೆಚ್ಚು ಲಾಭವಿರುವುದೆಂಬುದನ್ನು ಬಹು ಜಾಣ್ಮೆಯಿಂದ ಮನವಟ್ಟಾಗುವಂತೆ ತಿಳಿಸುತ್ತಾರೆ. ನೀವೇ ಯೋಚಿಸಿರಿ, ಈ ಮಾತುಗಳನ್ನು ಕೇಳಿದ ಗೃಹಿಣಿಯ ಮನಸ್ಸಿನ ಪರಿಸ್ಥಿತಿಯು ಹೇಗಾಗಬಹುದು

ಈ ಸಂದರ್ಭದಲ್ಲಿ ಒಂದು ನಡೆದ ವಿಷಯವನ್ನು ಹೇಳಬಯಸುತ್ತೇನೆ. ನಮ್ಮ ಮಗ್ಗುಲಮನೆಯ ಸುಬ್ಬರಾಯನೂ ಅವರ ಹೆಂಡತಿ ಸುಬ್ಬಮ್ಮನೂ ದಾಂಪತ್ಯ ವಿಚ್ಛೇದನ ಮಾಡಿಕೊಂಡ ಒಂದು ದುರ್ಘಟನೆ. ಅದಕ್ಕಾದರೂ ಕಾರಣವನ್ನು ದೂರದಲ್ಲಿ ಹುಡುಕಬೇಕಾಗಿಲ್ಲ. ಈ ವಿಮೆ ಇಳಿಸುವ ಗದ್ದಲದಿಂದಲೆ. ಒಂದು ದಿವಸ ಸುಬ್ಬರಾಯರು ಐದು ಸಹಸ್ರ ರೂಪಾಯಿಗಳಿಗೆ ವಿಮೆ ಇಳಿಸಿಕೊಂಡರು. ಮನಗೆ ಬಂದೊಡನೆ ತಮ್ಮ ಅರ್ಧಾಂಗಿಗೆ ಸಂಗತಿಯನ್ನು ತಿಳಿಸಿದರು ವಿಮೆ ಎಂದರೆ ಗೊತ್ತಿಲ್ಲದ ಆ ಮುಗ್ಧ ಪ್ರಾಣಿ ಹಾಗೆಂದರೇನೆಂದು ಕೇಳಿದಳು. ಹೇಳಿದರು ರಾಯರು. ತಾವು ಸತ್ತ ಕೂಡಲೇ ಸುಬ್ಬಮ್ಮನವರಿಗೆ ಐದು ಸಹಸ್ರ ರೂಪಾಯಿಗಳು ಒಂದೇ ಸಾರಿಗೆ ದೊರಕುವುದೆಂದು ಸುಬ್ಬಮ್ಮನವರು "ಆ ಸುದಿನವನ್ನು ನಾನೆಂದು ಕಾಣುವೆನೋ?" ಎಂದು ದೀರ್ಘವಾದ ನಿಟ್ಟುಸಿರು ಬಿಟ್ಟರಂತೆ. ಇದಕ್ಕಿಂತ ಪ್ರಬಲವಾದ ಕಾರಣ ಬೇರೆ ಬೇಕೆ?

ಯಾವುದೇ ವಿಷಯದಲ್ಲಿ ಜಗತ್ತಿನ ವಿಶ್ವವಿದ್ಯಾಲಯದಲ್ಲಿ ಓದಿದ

ಶಿಕ್ಷಕರಿಗಿಂತ ನುರಿತ ವಯೋವೃದ್ಧರ ಮತ್ತು ಜ್ಞಾನವೃದ್ಧರ ನುಡಿಗಳು ಶರಣರ ವಚನಗಳಿದ್ದಂತೆಯೇ.

ನಮ್ಮ ವೆಂಕಜ್ಜಿಯಾದರೂ ಈ ವಿಮಾ ವಿಷಯದಲ್ಲಿಯೂ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾಳೆ. ಅವಳಾದರೂ ನಮ್ಮ ಭಾರತದ ವಿಧವೆಯರನ್ನು ನೋಡಿ (ಅವಳೂ ಹೌದು) ಮನನೊಂದು ಕೊರಗಿ ಆಡಿದ ಮಾತುಗಳು. ಅವಳು ಹೇಳುವುದೇನೆಂದರೆ – ಮೊದಲು ಒಂದು ಸುಧಾಮ (ಅವಲಕ್ಕಿ) ವಿಮಾ ಕಂಪನಿಯೊಂದು ಸ್ಥಾಪಿತವಾಗಬೇಕು. ಅದಕ್ಕೆ ಪ್ರತಿ ಒಬ್ಬ ಲಗ್ನವಾದ ಗಂಡಸು ತಿಂಗಳಿಗೆ ಐದು ಸೇರು ಅವಲಕ್ಕಿಯನ್ನು ಕಂತಿನ ರೂಪವಾಗಿ ಕಟ್ಟುತ್ತಾ ಹೋಗಬೇಕು. ಅಕಸ್ಮಾತ್ ಗಂಡ ಮೃತಪಟ್ಟರೆ, ಮೃತನ ಹೆಂಡತಿ ಜೀವದಿಂದ ಇರುವವರೆಗೂ ಅವಳಿಗೆ ದಿನವಹಿ ಸಂಜೆಯ ತಿಂಡಿಗೆ ಅವಲಕ್ಕಿ ಮೊಸರನ್ನು ಕಂಪನಿಯವರು ಒದಗಿಸಬೇಕು. ಭಾರತದ ವಿಧವೆಯರ ಹಿತಕ್ಕಾಗಿ ತನು, ಮನ, ಧನಗಳನ್ನು ಅರ್ಪಿಸಿರುವ ಈಶ್ವರಚಂದ್ರ ವಿದ್ಯಾಸಾಗರ ಮತ್ತೂ ಈಗಿನ ಸುಧಾರಕರಿಗಿಂತ ನಮ್ಮ ಅಜ್ಜಿ ಒಂದಡಿಯನ್ನು ಮುಂದಿಟ್ಟಂತೆ ಆಗಲಿಲ್ಲವೆ? ಆಹಾ ಎಂತಹ ಯೋಜನೆ! ಈ ಯೋಜನೆಯಿಂದ ವಿಮಾ ಪ್ರಪಂಚದಲ್ಲಿ ಕ್ರಾಂತಿ ಉಂಟಾಗಬಹುದಲ್ಲವೆ?

---

# ನನ್ನ ಆಯುರ್ವೇದಾಶ್ರಮ

ಆಯುರ್ವೇದ ವಿದ್ಯೆಯು ಮುಗಿಲ ಮೇಲಿನ ಮೋಡವು ಕರಗುವಂತೆ ದಿನದಿನವೂ ಹೀನಸ್ಥಿತಿಯನ್ನೈದುವುದನ್ನು ಕಂಡು ಮರುಗಿ ನಾನು ಈ ವಿದ್ಯೆಯನ್ನು ಕಲಿಯಬೇಕಾಯಿತು. ನನ್ನ ಸಂಸಾರ ಶಕಟವು ನಿರಾಯಾಸವಾಗಿ ಸಾಗುತ್ತಿದ್ದರೂ ಕೇವಲ ಅಳಿದುಹೋಗುತ್ತಿರುವ ನಮ್ಮ ಸಂಸ್ಕೃತಿಗೆ ನವಚೇತನವನ್ನು ತುಂಬುವುದರ ಸಲುವಾಗಿ ಬಹಳ ಕಷ್ಟಪಟ್ಟು ಕಲಿತಿದ್ದೇನೆ. ಈಚೆಗೆ ಆಯುರ್ವೇದಶಾಲೆಗಳೂ ವಿಶ್ವವಿದ್ಯಾಲಯಗಳೂ ಸ್ಥಾಪಿತವಾಗಿವೆ. ಆದರೆ ನನ್ನ ಕಾಲದಲ್ಲಿ ಹಾಗಿರಲಿಲ್ಲ. ಆದ್ದರಿಂದ ನಮ್ಮೂರಿನ ಎಂಬತ್ತು ವರ್ಷ ಮಿಕ್ಕಿದ ಅಳಲೇಕಾಯಿ ಶಾಮಾಪಂಡಿತರ ಜ್ಞಾನ ಭಂಡಾರಕ್ಕೆ ಕನ್ನ ಹಾಕಿದೆನು ಅಳಲೇಕಾಯಿ ಪಂಡಿತರೆಂಬುವುದು ಅವರ ಅನ್ವರ್ಥನಾಮ, ಅವರು ಎಲ್ಲ ಔಷಧಗಳಿಗೂ ಅಳಲೇಕಾಯಿ ಉಪಯೋಗಿಸುತ್ತಿದ್ದುದೇ ಅದಕ್ಕೆ ಕಾರಣ.

ವಿದ್ಯೆಯನ್ನು ಕಲಿತುದು ಆಯಿತು. ಆದರೆ ಗಿರಾಕಿಗಳ ಸುಳಿವೇ ಇಲ್ಲ! ಏನುಮಾಡುವುದು? ನಾನಿರುವುದು ಬಯಲುಸೀಮೆ ಎಲ್ಲರೂ ದೃಢಕಾಯರು. ಅವರಿಗೆ ಖಾಯಿಲೆ ಬರುವುದಿಲ್ಲ ಬಂದರೂ ಔಷಧವನ್ನು ತೆಗೆದುಕೊಳ್ಳುವುದಿಲ್ಲ. ದುಡ್ಡುಕೊಟ್ಟು ಔಷಧ ತೆಗೆದುಕೊಳ್ಳುವುದು ಮಹಾಪಾತಕವೆಂದು ತಿಳಿದಿದ್ದಾರೆ. ಕಷ್ಟಾರ್ಜಿತದಿಂದ ಸಂಪಾದಿಸಿದ ನನ್ನ ಜ್ಞಾನಕ್ಕೆ ತುಕ್ಕು ಹಿಡಿಯುತ್ತ ಬಂದಿತು. ನಮ್ಮ ಊರಿನವರು, ಆರಂಭದಲ್ಲಿ ನನ್ನಲ್ಲಿ ಔಷಧ ತೆಗೆದುಕೊಂಡರು. ಆದರೆ ಅವರ ದುರ್ದೈವದಿಂದಲೋ, ನನ್ನ ದುರ್ದೈವದಿಂದಲೋ ಕೆಲವರಿಗೆ ಗುಣವಾಗಲಿಲ್ಲ. ಕೆಲವರು ಸತ್ತುಹೋದರು. ಆದರಲ್ಲಿ ನನ್ನದೇನು ತಪ್ಪು? ಅವರ ಆಯುಸ್ಸು ಕಡಿಮೆಯಾಗಿದ್ದರೆ ನಾನು ಮಾಡುವುದೇನು? ಔಷಧವನ್ನು ತುಂಬಬಹುದು, ಆದರೆ 'ಆಯುಸ್ಸನ್ನು ತುಂಬುವುಕ್ಕಾಗುವುದೆ? ಅನೇಕರು ಪಂಡಿತರಿಗೆ ಹಸ್ತಗುಣವು ಚೆನ್ನಾಗಿಲ್ಲವೆಂದರು. ಕೆಲವರು ನಾಡೀ ಪರೀಕ್ಷೆ

ಸಾಲದೆಂಬರು. ಮತ್ತೆ ಕೆಲವರು ನನಗೆರೋಗಜ್ಞಾನ ಚೆನ್ನಾಗಿ ಆಗುತ್ತದೆ ಯೆಂದೂ, ಆದರೆ ಔಷಧಜ್ಞಾನವು ಸಾಲದೆಂದರು. ತಿಳಿಯದ ಜನರಿಗೆ ತಿಳಿಹೇಳುವುದು ಬಹುಕಷ್ಟ ಅಂತೂ ಗಿರಾಕಿಗಳಿಲ್ಲದೆ ಹರತಾಳವನಾ ಚರಿಸಬೇಕಾಯಿತು

ಇದು ಕೊನೆಯುವರೆಗೆ ಸಾಗುವಮಾತಲ್ಲ ನಮ್ಮಲ್ಲಿ ಅನೇಕರು ಬೇರೆಬೇರೆ ದೇಶದಲ್ಲಿಯೂ, ವಿದೇಶಗಳಲ್ಲಿಯೂ ತಯಾರಾದ ಔಷಧಗಳನ್ನು (Patent Medicines) ಈಚೆಗೆ ಉಪಯೋಗಿಸವದಕ್ಕೆ ಆರಂಭಿಸಿ ದ್ದಾರೆ. ಅದರಂತೆ ಔಷಧಿಗಳನ್ನು ತಯಾರಿಸುವುದರ ಸಲುವಾಗಿ ಒಂದ ಔಷಧಾಲಯ (Pharmacy)ವನ್ನು ನನ್ನ ಹೆಸರಿನ ಮೇಲೆ ತೆರೆದಿದ್ದೇನೆ, ಅದಕ್ಕೆ "ಕೃಷ್ಣಾ ಫಾರ್ಮ್ಸಿ" ಎಂದು ಯಥಾವಿಧಿಯಾಗಿ ನಾಮಕರಣವೂ ಆಗಿದುತ್ತದ

ಔಷಧವ ಗುಣವು ಅದರ ಹೆಸರಿನಿಂದಲೇ ತಿಳಿಯಬೇಕು ಅದ ಕ್ಕಾಗಿಯೆ ನನ್ನ ಕಂಪನಿಯ ಔಷಧಗಳಿಗೆ ಜನರಂಜಕವಾಗಿಯೂ, ಜನರಿಗೆ ತಿಳಿಯುವಂತೆಯೂ ಹೆಸರುಗಳನ್ನು ಕೊಟ್ಟಿದ್ದೇನೆ. ಹಸ್ತಪತ್ರಿಕೆಗಳು ಎಲ್ಲ ಕಡೆಗಳಲ್ಲಿಯೂ ಸಾವಿರಗಟ್ಟಲೆ ಹಂಚಿದ್ದಾಗಿದೆ. ಹಸ್ತಪತ್ರಿಕೆಯ ಮಾದರಿ ಯನ್ನು ಓದುಗರ ಅವಗಾಹನೆಗಾಗಿ ಕೆಳಗೆ ಕೊಟ್ಟಿದೆ

ನಮ್ಮ ಫಾರ್ಮಸಿಯಲ್ಲಿ ತಯಾರಾಗುವ ಔಷಧಿಗಳು :—

೧. ಹಿಜಡಾರಿ :— ಇದರ ಸೇವನೆಯಿಂದ ನಪುಂಸಕತ್ವವು ಹೋಗಿ ಧೀರರೂ, ಶೂರರೂ ಆಗಿದ್ದಾರೆ ಅನೇಕ ಜನ ಸ್ತ್ರೀಯರು ಇದರ ಸೇವನೆ ಯಿಂದ ಪುರುಷರಾಗಿದ್ದಾರೆ.

೨. ಪುತ್ರಕಾಮೇಷ್ಟಿ ಗುಟಿಕಾ :— ಈ ಗುಳಿಗೆಗಳಿಂದ ಮಕ್ಕಳನ್ನು ಹೊಂದಿ ಮನೆಯನ್ನು ನಂದಗೋಕುಲವನ್ನಾಗಿ ಮಾಡಿಕೊಳ್ಳಿರಿ.

೩. ಜಂತೋಡ್ :— ಇದರ ಸೇವನೆಯಿಂದ ಜಂತುಗಳು (ದುಷ್ಟ ಜಂತುಗಳಲ್ಲ—ಹೊಟ್ಟೆಯಲ್ಲಿರುವವು ನಾಶವಾಗುವವು.)

೪. ದಮ್ಮುರಿ :— ಉಬ್ಬಸರೋಗಕ್ಕೆ ರಾಮಬಾಣ ಅಥವಾ ಕೃಷ್ಣ ಚಕ್ರ. ಉಬ್ಬಸರೋಗವಿಲ್ಲದವರೂ ಉಪಯೋಗಿಸಬಹುದು ಏನೂ ತೊಂದರೆ ಇಲ್ಲ.

೫ ಜ್ವರಪರಾರಿ :— ಎಂತಹ ಜ್ವರವಿದ್ದರೂ ನಿಲ್ಲುವುದಿಲ್ಲ.

೬. ಹಲ್‌ತಿಕ್ :— ಮುತ್ತುಗಳಂತೆ ನಿಮ್ಮ ಹಲ್ಲುಗಳು ಆಗಬೇಕಾದರೇ, ಉಪಯೋಗಿಸಿರಿ. ಇಲ್ಲವಾದರೆ ಬೇಡ

೭. ಸಾಫ್ ಜುಲಾಬ್ :— ನಿನ್ಮನ್ನು ಪ್ರವೃತ್ತಿಮಾರ್ಗಕ್ಕೆ ಹಚ್ಚುವುದಕ್ಕೆ ಇದೊಂದೇ ಸಾಧನ

೮. ತಿಮರಾಂಜನ್ :— ನಿರ್ಬಲರಾದವರು ಮೈಯಲ್ಲಿ ತಿಮರು ಹೆಚ್ಚಾಗುವುದಕ್ಕೆ ಉಪಯೋಗಿಸಬೇಕಾದ ಸಿದ್ಧೌಷಧ.

೯. ಪ್ರೆಗ್ನೊಲ್ :— ಗರ್ಭಿಣಿ ಸ್ತ್ರೀಯರು ತಪ್ಪದೆ ತೆಗೆದುಕೊಳ್ಳಬೇಕು.

೧೦. ಕೇಶನಾಶಿನಿ ತೈಲ :— ನಿಮ್ಮ ಸೇಫ್ಟಿರೇಜರುಗಳನ್ನು ಬಿಸಾಡಿರಿ! ನಿಮ್ಮ ಕ್ಷೌರಿಕನನ್ನು ಗಡೀಪಾರು ಮಾಡಿರಿ! ನಮ್ಮ ಕೇಶನಾಶಿನಿ ತೈಲವನ್ನು ಉಪಯೋಗಿಸಿ, ಗಲ್ಲಗಳನ್ನು ಸಾಲಿಗ್ರಾಮದಂತೆ ನುಣುಪಾಗಿ ಮಾಡಿಕೊಳ್ಳಿರಿ!!

೧೧. ಕೇಶವೃಧಿನಿ ತೈಲ :— ಈ ತೈಲದ ಬಗ್ಗೆ ನಡೆದ ಒಂದು ಘಟನೆಯನ್ನು ತಿಳಿಸುತ್ತೇವೆ. ಮುಂಬೈಪಟ್ಟಣದ, ಲೇಡಿ ಡಾಕ್ಟರ್ ಕ್ಷಮಾವತಿಬಾಯಿಯವರಿಗೆ ನಮ್ಮ ಕೇಶವೃದ್ಧಿನಿ ತೈಲವನ್ನು ಕಳಿಸಿದ್ದೆವು. ಅದನ್ನು ಅವರು ಸುಮ್ಮನೆ ಮೂಸಿ ನೋಡಿದುದರಿಂದ ಮೀಸೆಗಳು ಹುಟ್ಟಿದವು ಅವರು ಕೂಡಲೇ ಪತ್ರ ಬರೆದರು ಅವರಿಗೆ ನಾವು ಕೇಶನಾಸಿನಿ ತೈಲವನ್ನು ಕಳಿಸಿದೆವು. ಮೀಸೆಗಳು ಉದರಿಹೋದವು ಅವರಿಂದ ಬಂದ ಯೋಗ್ಯತಾಪತ್ರವನ್ನು ನೋಡಬಹುದು

೧೨. ಶಿಶುನಾಲ್ :— ಮಕ್ಕಳ ರೋಗಕ್ಕೆ ದಿವ್ಯವಾದ ಔಷಧ.

೧೩. ಸೇಂಗೋಲ್ :— ಕಡಲೇಕಾಯಿ ಸತ್ವದ ಎಣ್ಣೆ. ಹಸ್ತಸ್ಪರ್ಶವಿಲ್ಲದೆ ತಯಾರಿಸಿದ್ದು. ತುಪ್ಪದ ಬದಲು ಇದನ್ನು ಉಪಯೋಗಿಸಿದರೆ ಯಾರೂ ಬೇಡವೆನ್ನುವುದಿಲ್ಲ.

ಇವಲ್ಲದೆ, ಇತರ ಲೇಹ್ಯಗಳು, ಅರಿಷ್ಟಗಳು. ತೈಲಗಳು ದೊರೆಯುತ್ತವೆ. ತ್ವರೆಮಾಡಿರಿ!

---

# ವೆಂಕಟರಾಯರ ಪುಸ್ತಕಾವಲೋಕನ

ವೆಂಕಟರಾಯರು ತಾಲ್ಲೂಕು ಕಛೇರಿ ಜ್ಯುಡಿಷಿಯಲ್ ಗುಮಾಸ್ತರು. ಶಿಂಬೆ ಗುಮಾಸ್ತರ ಪೈಕಿ ಹೆಚ್ಚು ಸಂಬಳ ತೆಗೆದುಕೊಳ್ಳುತ್ತಿದ್ದವರೆಂದರೆ ಇವರು. ಆದರೇನು, ತಮ್ಮ ಬೃಹದ್ ಸಂಸಾರ ನೌಕೆಯನ್ನು ಸಾಗಿಸುವುದರಲ್ಲಿ ಸುಸ್ತಾಗಿದ್ದರು. ಆರುಜನ ಗಂಡುಮಕ್ಕಳು, ನಾಲ್ಕುಜನ ಹೆಣ್ಣುಮಕ್ಕಳು, ಹೈಸ್ಕೂಲಿನಲ್ಲಿ ಓದುತ್ತಿದ್ದ ಕಿರಿಯ ತಮ್ಮ, ಪ್ರೈಮರಿಸ್ಕೂಲಿನಲ್ಲಿ ಓದುತ್ತಿದ್ದ ಭಾವಮೈದುನ, ವರ್ಷಕ್ಕೊಂದು ಹಡೆಯುವ ಹೆಂಡತಿ, ಇಷ್ಟು ಜನಗಳ ತಿಂಗಳಿಗೆ ನಲವತ್ತು ರೂಪಾಯಿ ಸಂಬಳದಿಂದ ದಿನದೂಡಬೇಕಾಗಿತ್ತು.

ವೆಂಕಟರಾಯರು ಯಾವುದೋ ಒಂದು ರಿಕಾರ್ಡನ್ನು ಬಹು ಜಾಗ್ರತೆಯಾಗಿ ಮಾಡಿಕೊಟ್ಟದ್ದಕ್ಕೆ ಪಾರ್ಟಿಯು ಅವರಿಗೆ ಕಾಫೀ ತಿಂಡಿ ಕೊಡಿಸುವದಕ್ಕೆ ಕರೆದುಕೊಂಡುಹೋದ. ಕಾಫ್ಯಾದಿ ಪಾನೀಯಗಳ ಸೇವನೆಯಾದಮೇಲೆ ಕೈ ಒರೆಯಿಸಿಕೊಳ್ಳಲು ಹೋಟಲ ಮಾಣಿ ಒಂದು ಚೂರು ಕಾಗದ ಕೊಟ್ಟ. ಅದು "ಪ್ರಜಾಭಿಯ" ಪತ್ರಿಕೆಯ ಯಾವುದೋ ಸಂಚಿಕೆಯ ಅವಶೇಷ. ಆ ಕಾಗದದ ಮೇಲಿದ್ದ 'ಆದರ ಸ್ವೀಕಾರ'ದ ಕಡೆ ವೆಂಕಟರಾಯರ ದೃಷ್ಟಿ ಹರಿಯಿತು

ಆದರ ಸ್ವೀಕಾರ – 'ಕಮಲೆಯ ಕೊಲೆ', ಪತ್ತೇದಾರಿ ಕಾದಂಬರಿ, ಲೇಖಕರು ಶ್ರೀ ಡಿನಾರಗ ರಾಯಕೃಷ್ಣರವರು. ಕಮಲೆಯ ಕೊಲೆ ಯಾರಿಂದಾಯಿತೆನ್ನುವುದು ಇಡೀ ಗ್ರಂಥವನ್ನೋದಿದರೂ ತಿಳಿಯುವ ಹಾಗಿಲ್ಲ. ಈ ಗ್ರಂಥಕರ್ತರು ಕನ್ನಡಮ್ಮನ ಸೇವೆಯನ್ನು ಹೀಗೆಯೇ ಮಾಡಲಿ" ಎಂದಿತ್ತು.

ವೆಂಕಟರಾಯರು ಫಿಫ್ತ್‌ಫಾರಮ್ಮಿನಲ್ಲಿ ಓದುತ್ತಿದ್ದಾಗ ಸಾಹಿತ್ಯಸೇವೇ

ಮಾಡಬೇಕೆಂದು ಹೊರಟಿದ್ದರು. 'ಕವಿಯ ಹೃದಯ' ಎಂಬ ಇವರ ಕಿರುಕವಿತೆಯು ಸ್ಕೂಲ್ ಮ್ಯಾಗ್‌ಜೈನ್ ಕಡೆಯ ಪುಟದಲ್ಲಿ ಪ್ರಕಟವಾಗಿತ್ತು. ಆದರೆ ಒಂದು ದುರಂತವೊದಗಿ – ಅಂದರೆ ಲಗ್ನವಾಗಿ – ಸಾಹಿತ್ಯಸೇವೆಯನ್ನು ಅವರು ಬದಗಿರಿಸಬೇಕಾಯಿತು.

ಸಂಸಾರ ತಾಪತ್ರಯ ಯಾವಾಗಲೂ ಇದ್ದುದೇ. ಅದಕ್ಕಾಗಿ ಪುಸ್ತಕಗಳ ಕಡೆ ಗಮನಕೊಡದಿರುವುದು ಹೇಗೆ? ಸರಿ ಆ ತಿಂಗಳು ಸಂಬಳ ಬಂದಕೂಡಲೆ "ಕಮಲೆಯ ಕೊಲೆ" ಪತ್ತೇದಾರೀ ಕಾದಂಬರಿಯನ್ನು ಓದಿಯೇತೀರಬೇಕೆಂದು ನಿರ್ಧರಿಸಿದರು.

ಸಂಬಳ ಬಂದುದೂ ಆಯಿತು. 'ಕಮಲೆಯ ಕೊಲೆ'ಯನ್ನು ಹನ್ನೆರಡಾಣೆ ಕೊಟ್ಟು ಕೊಂಡುದೂ ಆಯಿತು. ಆದರೆ ಓದಲು ಪುರಸತ್ತೇ ಇಲ್ಲ. ಬರುವ ಭಾನುವಾರ ರಜವಿದೆ, ಸಾಹೇಬರು ಸರ್ಕೀಟಿಗೆ ಹೋಗಿರುತ್ತಾರೆ, ಆಗ ಮನೆಯಲ್ಲಿ ಸುಖವಾಗಿ ಓದಬಹುದು ಎಂದು ಸಮಾಧಾನ ಮಾಡಿಕೊಂಡರು.

ಆ ಭಾನುವಾರದ ದಿನ ಬೆಳಕಿನ ಕಾಫಿ, ಅಲ್ಪೋಪಹಾರ ಮುಗಿಸಿಕೊಂಡು, ಒಂದು ಚಿಟಿಕೆ ನಶ್ಯವನ್ನು ಏರಿಸಿ, ಬೆಳ್ಳಿಯಕಟ್ಟಿನ ಕನ್ನಡಕವನ್ನು ಮೂಗಿಗೆ ಸಿಕ್ಕಿಸಿ ಮನೆಯಲ್ಲಿದ್ದ ಒಂದೇ ಒಂದು ಮುರುಕಲು ಕುರ್ಚಿಯ ಮೇಲೆ ಕುಳಿತುಕೊಂಡರು – ಗ್ರಂಥಾವಲೋಕನಕ್ಕೆ.

ಕರಾಳರಾತ್ರಿ, ನಿಶಾದೇವಿಯ ಕರಿಯ ಸೀರೆ ಆಕಾಶವನ್ನೆಲ್ಲಾ ಮುಚ್ಚಿದೆ, ಮೋಡ ಕವಿದುದ........

"ಅಪ್ಪಾ, ಅಮ್ಮ ಹೇಳಿದ್ಲು, ಲಚ್ಚ್ಯಾಗೆ ಚಡ್ಡಿ ಹೊಲಿಸ್ಬೇಕಂತೆ, ಸ್ಕೂಲು ಹುಡುಗರೆಲ್ಲಾ ಅವನ ಹರಕ ಚಡ್ಡೀಗೆ ಪೋಸ್ಟಾಫೀಸ್ ಅಂತಾರೆ. ಅಪ್ಪಾ ನಂಗೊಂದು ಚಡ್ಡಿ ಹೊಲಿಸಪ್ಪ. ಹಬ್ಬಕ್ಕೆ ಹೊಲಿಸ್ತೀನಂತ ಹೇಳಿದ್ದಿ. ಅಪ್ಪಾ ನಮ್ಮ ಮೇಷ್ಟರು ಮತ್ತೆ ಮದುವೆಮಾಡಿಕೊಂಡಿದ್ದಾರೆ. ನೀನ್ಯಾಕೆ ಇನ್ನೊಂದು ಮದುವೆ ಮಾಡುಕೋ ಬಾರದಪ್ಪಾ...." ಒಂಭತ್ತು ವರ್ಷದ ರಾಮು ಪ್ರಾರಂಭಿಸಿದ.

"ಹೋಗೋ ನಾನೆಲ್ಲಾ ಹೊಲಿಸ್ತೀನಿ."....ಕರಾಳರಾತ್ರಿ, ನಿಶಾದೇವಿಯ ಕರಿಯಸೀರೆ ಆಕಾಶವನ್ನೆಲ್ಲಾ ಮುಚ್ಚಿದೆ. ಮೋಡ ಕವಿದು

ದರಿಂದ ನಕ್ಷತ್ರಗಳು ಕಾಣದಾಗಿವೆ. ಕಥಾನಾಯಕಿಯಾದ ಕಮಲೆ ಎತ್ತಲೋ ಹೊರಟಿದ್ದಾಳೆ ಅಶೋಕ ಕುಮಾರನು ..........

"ಅಪ್ಪಾ, ಮೇಡಂ ಹೇಳಿದ್ರು ಇನಸ್ಪೆಕ್ಟ್ರು ಬಂದಾಗ ನಾನು 'ಕಾಯಾ ಶ್ರೀ ಗೌರಿ' ಹೇಳಬೇಕಂತೆ ನನಗೊಂದು ರಿಬ್ಬನ್ ಲಂಗ ಹೊಲಿಸಪ್ಪಾ. ಅಪ್ಪಾ ನಿಮ್ಮ ದೊಡ್ಡ ಸಾಹೇಬ್ರು ಬಂದಾಗ ನೀನು 'ಕಾಯಾ ಶ್ರೀ ಗೌರಿ ಹೇಳ್ತೀಯಾ? ಅಪ್ಪಾ, ನಮ್ಮ ಹೆಡ್ ಮೇಡಂಗೆ ನಾವೆಲ್ಲಾ ಮುದಿಗೂಬೆ ಅಂತೀವೆ, ನಿಮ್ಮ ದೊಡ್ಡ ಸಾಹೇಬ್ರಿಗೆ ನೀವೇ ನಂತೀರಿ........?

ಹನ್ನೊಂದು ವರ್ಷದ ಪದ್ಮ ಪ್ರಾರಂಭಿಸಿದಳು.

"ಹೋಗೆ ಹೊಲ್ಸಿ ಕೊಡ್ತೀನಿ."

ಕರಾಳರಾತ್ರಿ, ನಿಶಾದೇವಿಯು ಕರಿಯಸೀರೆ ಆಕಾಶವನ್ನೆಲ್ಲಾ ಮುಚ್ಚಿದೆ ಮೋಡ ಕವಿದುದರಿಂದ ನಕ್ಷತ್ರಗಳು ಕಾಣೆಯಾಗಿವೆ ಕಥಾ ನಾಯಕಿಯಾದ ಕಮಲೆ ಎತ್ತಲೋ ಹೊರಟಿದ್ದಾಳೆ. ಅಶೋಕ ಕುಮಾರನು ಇವಳು ಏನು ಮಾಡುತ್ತಾಳೋ ಎಂದು ಹಿಂದೆಯೇ ಹೊರಟ. ಅಷ್ಟರಲ್ಲಿ ...

"ಅಪ್ಪಾ ನಮ್ಮಿಸ್ಕೂಲಲ್ಲಿ ಸರೋಜ, ಇಲ್ವೆ, ಯಾವ ಸರೋಜ ಅಂತೀಯಾ, ಉಬ್ಬಲ್ಲು ಸುಬ್ಬಮ್ಮನೋರ ಸರೋಜ, ಅವಳ ಅಕ್ಕಂಗೆ ಲಗ್ನಾಂತ ರಜ ತಗೊಂಡಿದ್ದಾಳೆ. ನನ್ನೂ ಮದ್ವೇಗೆ ಕರೆದೀದಾಳೆ. ನಾನೂ ಹೋಗುತೀನಪ್ಪ. ಸರೋಜನ ಅಕ್ಕನಗಂಡ ಹೇಗಿದಾನಪ್ಪ. ಸಿನ್ನ ಹಾಗಿದ್ದಾನೋ, ರಾಮು ಹಾಗಿದ್ದಾನೋ. ಅಮ್ಮನ್ನ ಲಗ್ನ ಮಾಡಿಕೋ ಬೇಕಾದಾಗ ನೀ ಹ್ಯಾಗಿದ್ದೀಪ್ಪಾ. ಅಪ್ಪ, ನಾನು ಮದುವೆ ಮಾಡಿ ಕೊಳ್ಳಲ್ಲ ನಮ್ಮ ಮೇರಿ ಮೇಡಮ್ಮ ಮದ್ವೆ ಮಾಡಿಕೊಂಡಿಲ್ಲ ಅಪ್ಪಾ ಹಬ್ಬಕ್ಕೆ ನಂಗೊಂದು ಜಂಪರ್...." "ಆಗಲಿ ಹೋಗು."

ಕರಾಳರಾತ್ರಿ, ನಿಶಾದೇವಿಯ ಕರಿಯಸೀರೆ ಆಕಾಶವನ್ನೆಲ್ಲಾ ಮುಚ್ಚಿದೆ. ಮೋಡ ಕವಿದುದರಿಂದ ನಕ್ಷತ್ರಗಳು ಕಾಣೆಯಾಗಿವೆ. ಕಥಾ ನಾಯಕಿಯಾದ ಕಮಲೆ ಎತ್ತಲೋ ಹೊರಟಿದ್ದಾಳೆ. ಅಶೋಕಕುಮಾರನು ಇವಳು ಏನು ಮಾಡುತ್ತಾಳೋ ಎಂದು ಹಿಂದೆಯೇ ಹೊರಟ. ಅಷ್ಟರಲ್ಲಿ

ಎಲ್ಲಿಂದಲೋ ಚೀತ್ಕಾರ ಧ್ವನಿ ಕೇಳಿಸಿತು. ಅಶೋಕ ಕುಮಾರನ ಮುಂದೆ ಸಾಗಿದ್ದ ಕಮಲೆ ಕೊಲೆಯಾಗಿದ್ದಳು. ಅಶೋಕ....

"ಸರಿಹೋಯ್ತು ಅಂದರೆ, ಮನೇಲಿ ಸಕ್ರೆ ಇಲ್ಲ, ಬೆಲ್ಲ ಇಲ್ಲ. ಕಾಫಿ ಮಾಡು ಅಂತ ಬೇರೆ ಹೇಳಿಕಳಿಸ್ತೀರಿ. ಮಗು ಅಳುತ್ತೆ ಕೊಂಚ ಎತ್ಗೊಳ್ಳಿ. ಎಂದೂ ಇಲ್ಲದ್ದು ಇವತ್ತೇನೋ ನೀವು ಓದೋದು" ಎಂತ ಹೆಂಡತಿ ವೆಂಕಮ್ಮನವರು ಮಾತಿಗೆ ಪ್ರಾರಂಭಿಸಿದರು.

ವೆಂಕಟರಾಯರು ಮಾತನಾಡಲು ಪ್ರಾರಂಭಿಸುವ ಮೊದಲೇ ಅವರ ೧೯೪೫ರ ಮಾಡೆಲ್ ಕೊನೆಯ ಮಗ ತೊಡೆಯನ್ನೇರಿದ್ದ. ಪುಸ್ತಕದ ರಕ್ಷಾಕವಚದ ಒಳಗಡೆ ಏನೋ ಇರಬೇಕೆಂದು ಹರಿದು ಹಾಕಿದ. ವೆಂಕಟರಾಯರು ಪುಸ್ತಕವನ್ನು ಮಗುವಿನ ಕೈಯಿಂದ ಕಸಿದುಕೊಳ್ಳುವ ಯತ್ನವನ್ನೂ ಮಾಡಲಿಲ್ಲ. ಮುಂದೆ ಬೇರೆ ಯಾವ ಪುಸ್ತಕವನ್ನಾಗಲೀ ಓದುವ ಸಾಹಸವನ್ನೂ ಮಾಡಲಿಲ್ಲ.

---

# ಚಲಚ್ಚಿತ್ರದ ಹುಚ್ಚುಗಳು

ನಮ್ಮ ಚಿತ್ರ ಪ್ರಪಂಚವೆಲ್ಲಾ ಒಂದು ಅನುಕರಣ ಪರಂಪರೆ. ಒಬ್ಬರು ಒಂದುಮಾಡಿ ಯಶವನ್ನಾಗಲೀ ಹಣವನ್ನಾಗಲೀ (ಇದರಲ್ಲಿ ಹಣವೇ ಮುಖ್ಯ ಅನ್ನಿ) ಸಂಪಾದಿಸಿದರೆ ಉಳಿದವರು ಕುರಿ ಹಳ್ಳಕ್ಕೆ ಬಿದ್ದಂತೆ ಬೀಳುತ್ತಾರೆ—ಆ ಮಾರ್ಗಕ್ಕೆ. ಹೊಸ ಪ್ರಯೋಗಗಳನ್ನು ಮಾಡಲು ಹೆದರಿಕೆ (ಬುರುಡೆಯೂ ಖಾಲಿ); ಆದ್ದರಿಂದ ಒಬ್ಬರು ಹಿಡಿದ ಜಾಡನ್ನು ಇನ್ನೊಬ್ಬರು ಹಿಡಿಯುವುದು ಪರಿಪಾಠವೇ ಆಗಿದೆ. ಇದೊಂದು ಅಂಟು ಜಾಡ್ಯ.

ಪ್ರಭಾತ್‌ರವರ ಸಂತ ತುಕಾರಾಮ ಹೊರಬಿದ್ದೊಡನೆ ನಮ್ಮ ದೇಶದಲ್ಲಿ ಎಲ್ಲೆಲ್ಲಿಯೂ ಸಾಧುಸಂತರ ಚಿತ್ರಗಳ ಸುರಿಮಳೆ ಆಯಿತು. ಸಾಧು ಸಂತರು ಜಗತ್ಕಲ್ಯಾಣಕ್ಕಾಗಿ ಅವತರಿಸುವರೆಂದು (ಭಾರತದಲ್ಲಿ ಧರ್ಮಗ್ಲಾನಿಯಾದ ಸಂದರ್ಭಗಳಲ್ಲಿ ಯುಗಯುಗದಲ್ಲಿ ತಾನು ಅವತಾರ ಮಾಡುತ್ತೇನೆಂದು ಪರಮಾತ್ಮನು ಗೀತೆಯಲ್ಲಿ ಹೇಳಿದ್ದಾನಷ್ಟೆ) ನಾವು ಭಾವಿಸಿದ್ದೆವು. ಆದರೆ ಸಿನಿಮಾದ ಈ ಸಾಧು ಸಂತರು ಅನರ್ಥ ಸಾಧನೆಗಾಗಿಯೇ ಹುಟ್ಟಿದ್ದರೆಂದು ಹೇಳಬಹುದು. ಸಾಧುಸಂತರ ಚಿತ್ರಗಳನ್ನು ತಯಾರಿಸದಿದ್ದ ಚಿತ್ರಸಂಸ್ಥೆಯೇ ಇಲ್ಲವೆಂದರೂ ತಪ್ಪಿಲ್ಲ. ಇತ್ತೀಚೆಗೆ ಈ ಸಂತರ ಸಾಂಕ್ರಾಮಿಕ ಜಾಡ್ಯ ಕೊಂಚ ಕಡಿಮೆಯಾಗಿದೆ. ಹೊಸ ಹುಚ್ಚುಗಳು ಹಳೆಯ ಹುಚ್ಚುಗಳ ಸ್ಥಾನವನ್ನಾಕ್ರಮಿಸಿದ್ದರಿಂದ ನಮ್ಮವರು ಸಂತರ ಚಿತ್ರಗಳನ್ನು ತಯಾರಿಸುವುದು ತಾತ್ಕಾಲಿಕವಾಗಿ ನಿಂತಿದೆಯೇನೋ! ಇಲ್ಲದಿದ್ದರೆ ನಮ್ಮ ಚಲಚ್ಚಿತ್ರ ಕರ್ದಿಮರು ನಮ್ಮನ್ನು ಇನ್ನೂ ಗೋಳು ಹುಯ್ದುಕೊಳ್ಳುತ್ತಿದ್ದರು.

x x x x

ಸಂತರ ಚಿತ್ರಗಳಾದ ಮೇಲೆ ಇನ್ನೊಂದು ತರಹೆ ಚಿತ್ರಗಳು ತಯಾರಾಗಲಾರಂಭಿಸಿದುವು. ಇವು ಅರ್ಧ ಸ್ಟಂಟ್ (ಸಾಹಸಿ) ಅರ್ಧ ಸಾಮಾ

ಜಿಕ ಚಿತ್ರಗಳು. ನಾಯಕ ನಾಯಕಿಯರ ಪ್ರಥಮ ಸಂದರ್ಶನದಲ್ಲೇ ಅವರಲ್ಲಿ ಪರಸ್ಪರ ಪ್ರೇಮಾಂಕುರವಾಗುವುದು. ನಾಯಕಿಯನ್ನು ಖಳ ನಾಯಕನು ತೀವ್ರವಾಗಿ ಕಾಮಿಸುವನು. ಸರಿ, ನಾಯಕನಿಗೂ ಖಳ ನಾಯಕನಿಗೂ ಮಾರಾಮಾರಿ. ನಾಯಕನು ನೆಪೋಲಿಯನ್ ಬೋನೋ ಪಾರ್ಟನನ್ನು ಮೀರಿಸುತ್ತಾನೆ. ಅಸಾಧ್ಯವೆಂಬುದು ಅವನ ಶಬ್ದಕೋಶ ವಲ್ಲಿಯೇ ಇಲ್ಲ! ಮನೆಯಿಂದ "ಸುಂಯ್" ಹಾರಿದರೆ ಅವನು ಇಳಿಯು ವುದು ಮರದಮೇಲೆಯೇ! ಇವನನ್ನೇ ಹುಡುಕುತ್ತಿದ್ದರೂ, ಖಳನಾಯಕನ ಕಡೆಯವರು ಅವನ ಎದುರಿಗಿದ್ದರೂ ಅವನನ್ನು ನೋಡುವುದೇ ಇಲ್ಲ! ೫೦ ಜನಗಳೊಂದಿಗೆ ಇವನೊಬ್ಬನೇ ಕಾದಾಡಬೇಕು. ಇವನು ಕತ್ತಿ ಹಿರಿದ ಕೂಡಲೇ ಹತ್ತಿಪ್ಪತ್ತು ಮಂದಿ ನೆಲಕ್ಕುರುಳಲೇಬೇಕು! ಮೋಟು ಗೋಡೆ ಯನ್ನು ಹಾರುವುದು ಇವನೊಬ್ಬನಿಗೇ ಸಾಧ್ಯ! ಇಷ್ಟೆಲ್ಲಾ ಹಾರಾಡಿ ಚೀರಾಡಿ ನಾಯಕಿಯನ್ನು ಕೂಡುತ್ತಾನೆ! ಮಂಗಳಂ.......

x x x x

ಸಾಹಸ—ಸಾಮಾಜಿಕಗಳಾದ ಬಳಿಕ ಐತಿಹಾಸಿಕ ಚಿತ್ರಗಳ ಹಾವಳಿ ಆರಂಭವಾಯಿತು. ಈ "ಹಿಸ್ಟಾರಿಕಲ್" (ಮಹನೀಯರೊಬ್ಬರು "ಹಿಸ್ಟಿರಿಕಲ್" ಅಂತ ಒಂದು ಚಿತ್ರದ ಬಗ್ಗೆ ಪ್ರಕಟನೆ ಮಾಡಿದ್ದರು. ಅದು ಹಾಗೆಯೇ ಇದ್ದಿತು) ಚಿತ್ರಗಳಲ್ಲಿ ಚರಿತ್ರೆ ಮತ್ತು ಕಟ್ಟು ಕತೆ ಬೆರೆತಿರುತ್ತದೆ. ಈ ಚಿತ್ರಗಳ ಯಶಸ್ಸೆಲ್ಲಾ ಸೆಟ್ಟಿಂಗ್‌ಗಳು, ಆನೆಗಳು, ಕುದುರೆಗಳು ಸಾವಿರಾರು ಜನಗಳು-ಇವುಗಳ ಮೇಲೆ ಮಾತ್ರ ಅವಲಂಬಿಸಿರುತ್ತೆ. ಭವ್ಯವಾದ ಯುದ್ಧ ದೃಶ್ಯಗಳಿದ್ದರೆ ಇನ್ನೂ ಕಳೆಕಟ್ಟುತ್ತದೆ. ಒಂದೆರಡು ಲಕ್ಷ ರೂಪಾಯಿಗಳನ್ನು ಬೋಳಿಸಿಕೊಳ್ಳಲು ಸಿದ್ಧನಾಗಿರುವ ಒಬ್ಬ ನಿರ್ಮಾಪಕ ಸಿಕ್ಕರೆ ಇಂತಹ ಚಿತ್ರಗಳನ್ನು ಯಾರು ಬೇಕಾದರೂ ಬಹು ಸುಲಭವಾಗಿ ತಯಾರಿಸಬಹುದು. 'ಪುಕಾರ್' 'ಸಿಕಂದರ್' 'ಪೃಥ್ವಿವಲ್ಲಭ್' ಚಿತ್ರಗಳು ಗಳಿಸಿದ ಯಶಸ್ಸನ್ನು ನೋಡಿ ಬಾಬರ್, ಹುಮಾಯೂನ್, ಷಹಜಹಾನ್ ಮುಂತಾದ ಚಿತ್ರಗಳು ತಯಾರಾಗುತ್ತಿವೆಂದು ಈಗಾಗಲೇ ಪತ್ರಿಕೆಗಳಲ್ಲಿ ವರದಿಯಾಗಿದೆ. 'ಅಕ್ಬರ'ನು ಬಂದು ನಮ್ಮನು ಪೀಡಿಸಿದ್ದಾಯಿತು! ಈ ಚಿತ್ರಗಳಲ್ಲಿ -ಇತಿಹಾಸವನ್ನು ಕೇವಲ ಚಿತ್ರದ ಶೀರ್ಷಿಕೆ

ಯಲ್ಲಿಯೂ ಮತ್ತು ನಾಯಕ ನಾಯಕಿಯರ ಹೆಸರಿನಲ್ಲಿಯೂ ನಾವು ಕಾಣಬಹುದು, ಅಷ್ಟೆ.

x x x x

ಮುಸ್ಲಿಂ ಸಾಮಾಜಿಕ ಚಿತ್ರಗಳ ಅಭಾವ ನಮ್ಮ ದೇಶದಲ್ಲಿ ಮೊದಲಿಗೆ ಬಹಳವಾಗಿದ್ದಿತು. ಈಗ ಅವುಗಳ ಉಬ್ಬರ ಬಹಳವಾಗಿದೆ. ಸಾಮಾನ್ಯವಾಗಿ ಉತ್ತರ ಹಿಂದುಸ್ಥಾನದ ಪ್ರತಿಯೊಂದು ಚಿತ್ರ ತಯಾರಿಕಾ ಸಂಸ್ಥೆಯೂ ಇಂತಹ ಚಿತ್ರಗಳನ್ನು ತಯಾರಿಸಲಾರಂಭಿಸಿದೆ.

ಮುದಿತನದ ಮೆಟ್ಟಲು ಹತ್ತುತ್ತಿರುವ ನಟಿ ದುರ್ಗಾಖೋಟೆ ಸಹ ಇಂತಹ ಚಿತ್ರವೊಂದರಲ್ಲಿ ದೊಗಲೆ ಷರಾಯಿಯನ್ನು ಹಾಕಿಕೊಂಡು ಭಯಂಕರವಾಗಿ ಕಂಡಳು! ದಕ್ಷಿಣ ಭಾರತ ನಟಿಯರ ಹಾಗೆ ಅಡ್ಡಡ್ಡಲಾಗಿ ಬೆಳೆಯುತ್ತಿರುವ ಮರಾಠಿ ನಟಿ ಶಾಂತಾಆಪ್ಟೆ ಸಹ ಒಂದು ಚಿತ್ರದಲ್ಲಿ ಈ ರೀತಿ ಉಡುಪನ್ನು ಧರಿಸಿ ಭೀಕರವಾಗಿ ತೋರಿದಳು! ಪಂಜಾಬಿ ಮಟ್ಟನಲ್ಲಿ ಹಾಡಲು ಬಾರದಿದ್ದರೂ. ಇವಳು ಷೂಟಿಂಗ್ ಸಮಯದಲ್ಲಿ ಅದನ್ನು ಅಭ್ಯಾಸ ಮಾಡಿ ಅಧ್ವಾನ ಸಂಗೀತದ ಸವಿತೋರಿದಳು!

x x x x

ಹಿಂದೂ ಸಾಮಾಜಿಕ ಚಿತ್ರಗಳನ್ನು ಪಂಚಾಬಿ ಉಡುಪಿನಲ್ಲಿ ತಯಾರಿಸುವುದು ಇನ್ನೊಂದು ಹೊಸ ಹುಚ್ಚು, "ಖಜಾಂಚಿ" "ಖಾಂದಾನ್" "ಪೂಂಜಿ" ಮುಂತಾದುವುಗಳೇ ಇಂತಹ ಚಿತ್ರಗಳ ಪಿತೃಗಳು. "ಖಜಾಂಚಿ" ಚಿತ್ರದಲ್ಲಿ ನಟಿಯೊಬ್ಬಳು ಡೋಲು ಬಡಿಯುತ್ತಿದ್ದಾಳೆ!

x x x

ಕೆಲವು ಚಿತ್ರ ತಯಾರಿಕರು ಚಿತ್ರ ಗಯಾರಿಕೆಗಾಗಿ ಒಂದು "ಪ್ರಿಸ್‌ಕ್ರಿಪ್‌ಷನ್" ಇಟ್ಟುಕೊಂಡಿದ್ದಾರೆ-ಈ 'ಪ್ರಿಸ್‌ಕ್ರಿಪ್‌ಷನ್' ಈ ರೀತಿ ಇದೆ:—

| | |
|---|---|
| ಸಂಗೀತ | ೩೦ |
| ತಾರಾಗಣ | ೨೫ |
| ಹಾಸ್ಯ | ೧೦ |
| ನರ್ತನ | ೧೫ |
| ಕಥೆ | ೧೦ |
| ಪಾರಿಶ್ರಾಮಿಕ | ೧೦ |
| ಒಟ್ಟು | ೧೦೦ |

ಪ್ರತಿ ಚಿತ್ರದಲ್ಲಿಯೂ ಇದರ "ರಿಪೀಟ್ ಮಿಕ್ಸ್‌ಶ್ಚರ್" ಇರುತ್ತೆ. ಈ "ಡೋಸೇಜ್" ಅನ್ನು ಏನು ಮಾಡಿದರೂ ತಪ್ಪಿಸುವುದಿಲ್ಲ. ಹಣ ಗಳಿಕೆಗೆ ಇದೇ ಮೂಲಮಂತ್ರವೆಂದು ಚಿತ್ರಗಳ ನಿರ್ಮಾಪಕರ ನಿಶ್ಚಿತಾಭಿಪ್ರಾಯ!

ಪ್ರತಿ ಸಾಮಾಜಿಕ ಚಿತ್ರದ ಕತೆಯೊ ಒಂದೇ ಸಮನಾಗಿರುತ್ತೆ. ನಾಯಕ ನಾಯಕಿಯರು ಪ್ರಥಮ ಸಂದರ್ಶನದಲ್ಲಿ ಪ್ರೇಮಾಂಕುರವಾಗುವುದು, ಖಳನಾಯಕನ ಪಿತೂರಿಯಿಂದ ನಾಯಕನ ಮೇಲೆ ಒಂದು ಕೊಲೆಯ ಆಪಾದನೆ ಬೀಳುವುದು. ಇನ್ನೇನು ನಾಯಕನನ್ನು ಗಲ್ಲಿಗೆ ಹಾಕಬೇಕು ಎಂಬ ಸಂದರ್ಭದಲ್ಲಿ ನಿಜಾಂಶಗಳು ಹೊರಬಿದ್ದು ನಾಯಕನ ಖುಲಾಸೆಯಾಗುವುದು

ಈ ನಾಯಕ ನಾಯಕಿಯರ ಗುಣಗಳು ಹೀಗೇ ಇರಬೇಕು ಎಂಬ ಶ್ರಾದ್ಧನಿಯಮವೂ ಇದೆ. ನಾಯಕ ಅರ್ಜುನನಂತಹ ಪರಾಕ್ರಮಿ, ಹರಿಶ್ಚಂದ್ರನಂತಹ ಸತ್ಯವಾದಿ, ತ್ಯಾಗದಲ್ಲಿ ಕರ್ಣ, ರೂಪದಲ್ಲಿ ಮನ್ಮಥ; ನಾಯಕಿ-ರೂಪರಾಣಿ, ಪ್ರೇಮ ಪುತ್ತಳಿ, ಸಂಗೀತ ಸುಧಾಂಬುಧಿ, ಅಳುವುದರಲ್ಲಂತೂ ನಿಸ್ಸೀಮಳು!

ನ್ಯಾಯಾಸ್ಥಾನದ ದೃಶ್ಯಗಳು ಸಾಮಾಜಿಕದಲ್ಲಿ ಬಂದೇ ಬರಬೇಕು. ನಾವೂ ಎಷ್ಟೋ ನ್ಯಾಯಾಸ್ಥಾನಗಳನ್ನು ನೋಡಿದ್ದೇವೆ. ಚಿತ್ರರಂಗದ ನ್ಯಾಯಾಸ್ಥಾನಗಳಷ್ಟು ವಿಚಿತ್ರವಾದುವನ್ನೆಲ್ಲೂ ಕಾಣಲಿಲ್ಲ ಅಲ್ಲಿನ ನ್ಯಾಯಾನ್ಯಾಯ ವಿಮರ್ಶೆಯೂ ಹಾಗೆಯೇ.

x x x x

ಅಧ್ವಾನಕ್ಕೆ ತಮಿಳು ಚಿತ್ರಗಳಿಗೆ ಅಗ್ರತಾಂಬೂಲ ಕೊಡಬೇಕು. ತಮಿಳರ ಸಾಮಾಜಿಕ ಚಿತ್ರದಲ್ಲಿ ಕೂಡ ದೇವರು ಎಲ್ಲಿಂದಲೋ ಇಳಿದು ಬರುತ್ತಾನೆ. ತಮಿಳು ಚಿತ್ರಗಳಲ್ಲಿ ಬಹಳ ಮುಖ್ಯವಾದುದು ಸಂಗೀತ. ಸ, ರಿ, ಗ, ಮ ವರಸೆಗಳೊಂದಿಗೆ ನಾಯಕ ನಾಯಕಿಯರು ನಿಂತಲ್ಲಿ ಕೂತಲ್ಲಿ ಹಾಡುವರು. ಇವರ ಹಾಡು ಬೇಸರವಾಗುವ ಹೊತ್ತಿಗೆ ಕೃಷ್ಣನ್ ಮತ್ತು ಮಧುರಂ ಹಾಸ್ಯ!

ತಮಿಳುಚಿತ್ರ ನಿರ್ಮಾಪಕರು ತಮ್ಮ ಚಿತ್ರಕತೆಗಾಗಿ ಕಷ್ಟಪಡಲೇ

ಬೇಕಾಗಿಲ್ಲ. ನಾವು ಚಿಕ್ಕವರಾಗಿದ್ದಾಗ ಮನೆಯಲ್ಲಿನ ಮುದುಕರು ನಮ್ಮ ಮನರಂಜನೆಗಾಗಿ ಹೇಳುತ್ತಿದ್ದ ಅಡಗೂಲಜ್ಜಿ ಕತೆಗಳಾದರಾಯಿತು.

ಒಂದಾನೊಂದು ಕಾಲದಲ್ಲಿ ಒಂದಾನೊಂದು ಪಟ್ಟಣವಿತ್ತು. ನೀಲ ಮೇಘ ಎಂಬ ಅರಸನಿದ್ದ, ನೀಲವ್ಮಣಿ ಎಂಬ ರಾಣಿಯಿದ್ದಳು .......

ಕೊನೆಗೆ ಅವರಿಬ್ಬರೂ ರಾಜ್ಯಭಾರ ಮಾಡಿಕೊಂಡು ಸುಖವಾಗಿ ಇದ್ದರು.

ತಮಿಳುಚಿತ್ರಗಳಲ್ಲಿ ನಟನಟಿಯರು ತೀರಾ ದಪ್ಪಗಿರುವುದರಿಂದ ಹೆಚ್ಚು ಮಂದಿ ನಟನಟಿಯರನ್ನು ಏಕಕಾಲದಲ್ಲಿ ತೆರೆಯಮೇಲೆ ಅವರಿಗೆ ತರುವುದು ಸಾಧ್ಯವೇ ಇಲ್ಲ. ಆದ್ದರಿಂದ ಒಬ್ಬಿಬ್ಬರನ್ನೇ ತರುತ್ತಾರೆ ಅವರ "ಕ್ಲೋಸ್-ಅಪ್"ಗಳನ್ನು ತೋರಿಸುತ್ತಾ ಹೋಗುತ್ತಾರೆ. ತಮಿಳು ಚಿತ್ರಗಳು ಬಹಳ ಉದ್ದವಾಗಿರುವದಕ್ಕೆ ಇದೇ ಪ್ರಧಾನಕಾರಣವಿರಬೇಕು.

ಒಂದು ಸಾರಿ ಹನುಮಂತನ ಬಾಲ ಕಳೆದುಹೋಯಿತಂತೆ. ಅದನ್ನು ಹುಡುಕುತ್ತಾ ಹನುಮಂತ ಒಂದು ತಮಿಳುಚಿತ್ರ ನಿರ್ಮಾಣಶಾಲೆಯನು ನುಗ್ಗಿ ಕಳೆದುಹೋಗಿದ್ದ ತನ್ನ ಬಾಲಕ್ಕೆ ಪ್ರತಿಯಾಗಿ ಒಂದು ಸೆಲೊ ಲಾಯಿಡ್ ಬಾಲ ಪಡೆದುಕೊಂಡು ಹೋದೆನೆಂದು ಪ್ರತೀತಿ ಇದೆ.

x x x x

ತೆಲುಗಿನವರು ಸಾಮಾಜಿಕ ಚಿತ್ರಗಳನ್ನು ಹೆಚ್ಚಾಗಿ ತಯಾರಿಸುತ್ತಾರೆ. ಇದರಲ್ಲಿ ಹೆಚ್ಚು ಸಂಖ್ಯೆಯವು "ಸ್ಟೆಪ್ನಿ" ಹೆಂಡತಿ ಸಮಸ್ಯೆಗೆ ಸಂಬಂಧಿಸಿದವು.

ನಾಯಕನಿಗೆ ಒಂದು ಮದುವೆಯಾಗಿರುತ್ತೆ. ಅಥವಾ ಅವನು ಒಬ್ಬಳನ್ನು ಪ್ರೀತಿಸಿರುತ್ತಾನೆ. ಕಾರಣಾಂತರಗಳಿಂದ ಅವನು ಇನ್ನೊಂದು ಮದುವೆಯಾಗುತ್ತಾನೆ, ಇಲ್ಲವೆ ಇನ್ನೊಬ್ಬಳನ್ನು ಪ್ರೀತಿಸುತ್ತಾನೆ. ಇದರಿಂದ ಹುಟ್ಟಿದ ಸಮಸ್ಯೆಗಳ ಪರಿಹಾರವೇ ಕಥಾವಸ್ತು; ಈ "ಸ್ಟೆಪ್ನಿ" ಹೆಂಡತಿ ಬಾರದಿದ್ದಲ್ಲಿ ತೆಲಗು ಸಾಮಾಜಿಕ ಚಿತ್ರಗಳು ತಯಾರಾಗುವುದು ಸಾಧ್ಯವೇ ಇಲ್ಲ.

ಇನ್ನು ಕನ್ನಡ ಚಿತ್ರಗಳ ಬಗ್ಗೆ ಕೊಂಚ ಹೇಳಬಯಸುತ್ತೇನೆ. ಕನ್ನಡ ಚಿತ್ರಗಳ ವರ್ಗೀಕರಣ ಮಾಡುವುದು ಸಾಧ್ಯವೇ ಇಲ್ಲ. ಒಂದೊಂದೂ

ವಿಜಾತೀಯವಾಗಿಯೂ, ವಿಚಿತ್ರವಾಗಿಯೂ ಇದೆ. ಅವನ್ನು ತಯಾರಿಸದೆ ಸುಮ್ಮನಿದ್ದರೆ ಚೆನ್ನಾಗಿತ್ತೇನೋ ಎಂದೆನಿಸುತ್ತದೆ. ಮೊದಲಿಗೆ ಕನ್ನಡದಲ್ಲಿ ಚಿತ್ರವಿಲ್ಲವಲ್ಲ ಎಂಬ ಒಂದೇ ಕೊರತೆ ನಮ್ಮನ್ನು ಬಾಧಿಸುತ್ತಿತ್ತು. ಈಗ ನಾನಾ ಕೊರತೆಗಳು ಆರಂಭವಾಗಿವೆ. ಮಕ್ಕಳಿಲ್ಲದಿದ್ದರೆ ಒಂದು ಕೊರತೆ. ಮಕ್ಕಳಾದರೆ ನಾನಾ ಕೊರತೆ ಎಂಬಂತೆ! ಈಗ ನಮ್ಮ ಮಹತ್ಸಮಸ್ಯೆ ಇಂತಹ ಕನ್ನಡ ಚಿತ್ರಗಳೇ ಇನ್ನು ಮುಂದೆಯೂ ತಯಾರಾಗುತ್ತ ಹೋದರೆ ನಮ್ಮ ಗತಿಯೇನು ಎಂಬುದೇ ಆಗಿದೆ.

---

# ಪೀಡಾ ಪರಿಹಾರ

ಜನ್ಮಕ್ಕೆ ಹತ್ತಿದ ವ್ಯಾಧಿಯನ್ನು ಬಹು ಸುಲಭವಾಗಿ ಕೊಡವಿಬಿಡಬಹುದು. ಆದರೆ ಬೆನ್ನುಬಿದ್ದ ವಿಮಾದಲ್ಲಾಳಿಯನ್ನು ಅಟ್ಟುವುದು ಸಾಧ್ಯವಿಲ್ಲ. ನೀವು ಆಫೀಸಿಗೆ ಹೋಗುವಾಗ, ಬರುವಾಗ, ದಾರಿ ಕಾಯುತ್ತಿರುತ್ತಾನೆ. ಬೇರೊಬ್ಬ ಸಾಲಗಾರನಿಗೆ ಗಸ್ತು ಕೊಡಬೇಕೆಂದು ಗಲ್ಲಿಬಿದ್ದರೆ ಈ ವಿಮಾದಲ್ಲಾಳಿ ಅಲ್ಲಿ ಪ್ರತ್ಯಕ್ಷನಾಗುತ್ತಾನೆ. ಆಗಲೇ ಭಾಷಣಕ್ಕೂ ಆರಂಭಿಸಿ ಬಿಡುತ್ತಾನೆ, "ಇರುವೆಗಳು ಸಹ ಮಳಗಾಲಕ್ಕೆಂದು ಕೂಡಿಡುತ್ತವೆ. ಜೇನು ನೊಣಗಳ ಉದಾಹರಣೆ ನೋಡಿ. ಕೆಲಸದಿಂದ ನಿವೃತ್ತಿ ಹೊಂದಿದ ಮೇಲೆ ಒಂದು ಮನೆ, ಹತ್ತು ಎಕರೆಯ ಒಂದು ತೋಟ...." ಇತ್ಯಾದಿ, ಇತ್ಯಾದಿ.

ಸ್ವಪ್ನದಲ್ಲಿ ಸಹ ಈ ಪ್ರಾಣಿ ಕಾಣಿಸಿಕೊಳ್ಳುತ್ತಾನೆ. ಅದೇ ಸೋಡಾ ಬಾಟ್ಲ್ ಕನ್ನಡಕ, ಅಳಿಸದ ಹುಸಿನಗು; ಲಕ್ಷಕ್ಕೆ ಮೀರಿದ ಮಾತುಗಳು, ಗರಿಗರಿ ಸೂಟು, ಕೈಯಲ್ಲೊಂದು ಚರ್ಮದ ಚೀಲ.

ಸ್ವಪ್ನಫಲಗಳ ಬಗ್ಗೆ ಹೆಚ್ಚಾಗಿ ತಿಳಿದ ಮಹನೀಯರು, ವಿಮಾದಲ್ಲಾಳಿಯು ಸ್ವಪ್ನದಲ್ಲಿ ಕಾಣಿಸಿಕೊಂಡರೆ ಆಗುವ ಫಲ(?) ಏನೆಂಬುದನ್ನು ನನಗೆ ತಿಳಿಸಿದಲ್ಲಿ ಅವರಿಗೆ ನಾನು ತುಂಬಾ ಕೃತಜ್ಞನಾಗಿರುತ್ತೇನೆ.

ಸರ್ಕಾರದವರು ಎಷ್ಟೋ ತರಹೆ ಆರ್ಡಿನೆನ್ಸ್‌ಗಳನ್ನು ದಿನದಿನವೂ ಜಾರಿಮಾಡುತ್ತಿದ್ದಾರೆ. ಸಾಮಾನ್ಯವಾಗಿ ಎಲ್ಲವೂ "ಕಂಟ್ರೋಲ್" ಪದ್ಧತಿಗೆ ಒಳಪಟ್ಟಿವೆ. "ಸರ್ವಂ ಕಂಟ್ರೋಲ್ ಮಯಂ ಜಗತ್ ಆಗಿದೆ." ಆದರೆ ಈ ವಿಮಾದಲ್ಲಾಳಿಗಳ (ಇದೇ ಶಬ್ದವನ್ನು ಮೊಳೆಜೋಡಿಸುವ ಹುಡುಗ "ವಿಮಾನದಾಳಿ" ಅಂತ ಮಾಡಿದ್ದ) ಹಾವಳಿ ಕಡಿಮೆಮಾಡಲು ಏನಾದರೂ ಶಾಸನವನ್ನು ಜಾರಿಯಲ್ಲಿ ತರಬಾರದೇ?

ಈ ದಲ್ಲಾಳಿ ಪ್ರಾಣಿಗೆ ಯಾವ ರೀತಿ ಉತ್ತರ ಕೊಟ್ಟರೂ ನಮ್ಮ

ಬೇಳೆ ಬೇಯುವುದಿಲ್ಲ. 'ನಮ್ಮ ವರಮಾನ ಕಡಿಮೆ, ಕಂತು ಕಟ್ಟುವುದು ಹೇಗೆ?' ಎಂದರೆ, "ಅದೇ ಕಾರಣದಿಂದ ನೀವು ವಿಮೆ ಮಾಡಿಸಬೇಕು. ವಿಮೆ ಅಂದರೆ ಆಪತ್ಕಾಲದ ನಂಟ, ನೀವು ಅಕಸ್ಮಾತ್ತಾಗಿ ಸತ್ತುಹೋದರೆ ನಿಮ್ಮ ಹೆಂಡತಿ ಮಕ್ಕಳ ಪಾಡೇನು?" ನನ್ನ ಹೆಂಡತಿಮಕ್ಕಳ ಹಿತಚಿಂತನೆ ಈ ದಲ್ಲಾಳಿಗೆ ನನಗಿಂತಲೂ ಅಧಿಕವಾಗಿರುವುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ ಏನಾದರೂ ನಾವು ಈ ಕಂಪೆನಿಗಿಂತ ಬೇರೆ ಕಂಪನಿ ಚೆನ್ನಾಗಿದೆ ಎಂತ ಹೇಳಿದರೆ, ಎದುರಿಗೆ ಪುಸ್ತಕಗಳ ದೊಡ್ಡ ಅಂಗಡಿಯೊಂದನ್ನೇ ಹರವಿಬಿಡುತ್ತಿದ್ದ. ಕಂಠಪಾಠ ಮಾಡಿಕೊಂಡಿದ್ದ ಅಂಕಿ ಅಂಶಗಳನ್ನು ಹಳ್ಳಿಯ ಹುಡುಗರು ಅಮರ ಒಪ್ಪಿಸುವ ಹಾಗೆ ಒಪ್ಪಿಸಿಬಿಡುತ್ತಿದ್ದ. ಈಗ ವಿಮೆ ಮಾಡಿಸುವುದು ಸಾಧ್ಯವಿಲ್ಲೆಂತಲೂ ಬೇರೆ ಇನ್ನಾವಾಗಲಾದರೂ ಮಾಡಿಸಿದರೆ ಆದೀತೆಂದು ಹೇಳಿದರೆ, ಹೇಳಿದ ದಿನಕ್ಕೆ, ಗಂಟೆಗೆ, ಗಳಿಗೆಗೆ ಅವತರಿಸಿ ಬಿಡುತ್ತಿದ್ದ.

"ನಮಸ್ಕಾರ, ಬಹಳ ಅಪರೂಪ, ಅದೇ ನಿಮ್ಮನ್ನೇ ನೋಡೋಣಾಂತ ಹೊರಟಿದ್ದೆ." ಇದು ಅವನ ಆರಂಭ ಭಾಷಣ. 'ಒಂದು ವಿಷಯ ಹೇಳ್ತೀನಿ ಕೇಳಿ, ಅದೇ ವೆಂಕಟರಾಮಯ್ಯ ಹತ್ತುಸಾವಿರಕ್ಕೆ ಇನ್‌ಷೂರ್ ಮಾಡಿದ್ದನಲ್ಲ, ಇವತ್ತು 'ಓಂ' ಅಂದ. ಒಂದೇ ಒಂದು ಕಂತು ಕಟ್ಟಿದ್ದ. ಎಲ್ಲಾ ಅದೃಷ್ಟ ನೋಡಿ."

ಇದಕ್ಕೆ ಏನಂತ ಉತ್ತರಕೊಡಬೇಕೋ ನೀವೇ ಹೇಳಿ. ವೆಂಕಟರಾಮಯ್ಯನ ಒಳ್ಳೆಯ ಅದೃಷ್ಟ ಬೇಕೆನ್ನಬೇಕೋ ಬೇಡವೆನ್ನಬೇಕೋ?

ಆಫೀಸ್ ಕೆಲಸ ಮುಗಿಯಿಸಿಕೊಂಡು ವೇಣುವಿನ ಅಂಗಡಿಯಲ್ಲಿ ಹರಟೆ ಹೊಡೆಯುವುದು ನನ್ನ ನಿತ್ಯ ವಿಧಿಗಳಲ್ಲಿ ಒಂದಾಗಿತ್ತು. ಆದರೆ ಈ ದಲ್ಲಾಳಿ ಪ್ರಾಣಿಯನ್ನು ವೇಣೂನ ಅಂಗಡಿಯಲ್ಲಿ ಒಂದು ಸಾರಿ ನೋಡಿದೆ. ನನ್ನ ದೊಡ್ಡ ಜೀವವೇ ಹಾರಿಹೋಯಿತು. ಶತ್ರುವು ಹೊಸ ಪ್ರದೇಶಗಳನ್ನು ಆಕ್ರಮಿಸಲು ಆರಂಭಿಸಿದನಲ್ಲಾ ಎಂದು ವಿಸ್ಮಯವೂ ವಿಷಾದವೂ ಏಕಕಾಲದಲ್ಲಾಯಿತು.

ಶತ್ರು ಆಕ್ರಮಿತ ಸ್ಥಾನದಲ್ಲಿ ಕಾಲಿಕ್ಕುವುದಾದರೂ ಹೇಗೆ? ಸರಿ, ವೇಣೂನ ಅಂಗಡಿಗೆ ಹೋಗುವುದನ್ನು ಬಿಟ್ಟುಬಿಟ್ಟೆ. ಒಂದು ದಿನ ರಸ್ತೆ

ಯಲ್ಲಿ ವೇಣೂ ಸಿಕ್ಕಾಗ ನನ್ನನ್ನು ಸ್ನೇಹಿತರ ಭಾಷೆಯಲ್ಲಿ ವಿಪರೀತ ಬಯ್ದ. ಅವನಿಗೆ ನನ್ನ ದುಃಖದ ಕಾರಣವನ್ನು ತೋಡಿಕೊಂಡೆ. ಈ ಪೀಡೆಯಿಂದ ಪಾರಾಗಲು ವೇಣುವು ಬಹಳ ಯೋಚಿಸಿದ. ಕೊನೆಗೆ ಕುಶಾಗ್ರಬುದ್ಧಿಯ ಕೃಷ್ಣಪ್ಪನಿಗೆ ಈ ವಿಷಯ ತಿಳಿಸಿ ಮುಂದಿನ ಕಾರ್ಯಕ್ರಮ ತೆಗೆದುಕೊಳ್ಳ ಬೇಕೆಂದು ನಿರ್ಧರಿಸಿದೆವು.

ಕೃಷ್ಣಪ್ಪ ಬಹಳ ಚೂಟಿ ಮನುಷ್ಯ. ಇಂತಹ ಮನುಷ್ಯರನ್ನು ನೀರು ಕುಡಿದಂತೆ ಬಗೆಹರಿಯಿಸಬಲ್ಲ ಸಾಮರ್ಥ್ಯ ಅವನಲ್ಲಿತ್ತು ಅವನು ಹೇಳುವ ಸುಳ್ಳುಗಳು ತೀರಾ ನಿಜವೆಂದೇ ನಂಬುವ ಹಾಗಿದ್ದರಿಂದ, ಅವನೊಬ್ಬ ಭಾರೀ ರಾಜಕಾರಣಿಯಾಗುತ್ತಾನೆಂದು ನಮ್ಮೆಲ್ಲರ ಮನವರಿಕೆಯಾಗಿತ್ತು. ನಮ್ಮ ಗೋಳನ್ನು ಕೇಳಿ ಅವನಿಗೆ ವಿಪರೀತ ನಗುಬಂತು ಇಂತಹ ವಿಪತ್ಸಮಯದಲ್ಲಿ ಅವನು ನಗುವುದನ್ನು ನೋಡಿ ನಮಗೆ ತುಂಬಾ ಸಿಟ್ಟು ಬಂದೀತು. "ಬಿಡ್ರೋ ನೀವ್ಯಾಕೆ ಇಷ್ಟು ಹೆದರುತ್ತೀರಿ. ಇನ್ನೊಂದು ಸಾರಿ ಆ ಮನುಷ್ಯ ನಿಮ್ಮ ಹತ್ರ ಬರದ ಹಾಗೆ ನಾನು ನೋಡಿಕೋತೇನೆ" ಅಂತ ವಿಷ್ಣುವು, ರಾಕ್ಷಸರ ಬಾಧೆ ತಡೆಯಲಾರದೆ ಮರೆಹೊಕ್ಕ ಋಷಿಗಳಿಗೆ ಅಭಯ ವಚನವಿತ್ತಂತೆ ನಮಗೆ ಹೇಳಿದ.

ಮಾರನೆಯ ದಿನ ದಲ್ಲಾಳಿ ಪ್ರಾಣಿ ವೇಣೂನ ಅಂಗಡಿಗೆ ಬಂದಾಗ, ೨೦೦೦ ರೂಪಾಯಿಗಳಿಗೆ ತಾನು ವಿಮೆ ಮಾಡಿಸಬೇಕಾಗಿದೆಯೆಂದು ಕೃಷ್ಣಪ್ಪ ಹೇಳಿದ. ಸರಿ, ದಲ್ಲಾಳಿಯ ಆನಂದಕ್ಕೆ ಪಾರವೇ ಇಲ್ಲ. ಆಗಲೇ ತನ್ನ ಚೀಲದಲ್ಲಿದ್ದ ಫಾರಂಗಳನ್ನು ಹೊರತೆಗೆದ. ಕೃಷ್ಣಪ್ಪ ಈ ಯುದ್ಧ ದಲ್ಲಿ ಯಾವ ರೀತಿ ಮುನ್ನುಗ್ಗುತ್ತಾನೆಂಬುದರ ಅರಿವು ನಮಗಿರಲಿಲ್ಲ. ಆದರೆ ಯುದ್ಧದಲ್ಲಿ ಅಂತ್ಯಜಯ ಕೃಷ್ಣಪ್ಪನದೇ ಎಂಬುದು ನಮಗೆ ಖಚಿತ ವಾಗಿ ತಿಳಿದಿತ್ತು.

ಅಂಗಡಿಯಲ್ಲಿ ಕುಳಿತಿದ್ದ ನಮ್ಮನ್ನೆಲ್ಲ, ದಲ್ಲಾಳಿಯು, ಹೋಟಲಿಗೆ ಕರೆದುಕೊಂಡು ಹೋಗಿ ಬೇಕಾದಷ್ಟು ತಿಂಡಿ ಕೊಡಿಸಿದ. ನಾವೆಲ್ಲರೂ ಕೃಷ್ಣಪ್ಪನನ್ನು ಅನುಕರಿಸಬೇಕೆಂದು ಹೇಳಿದ.

ಸರಿ, ಡಾಕ್ಟರ ಪರೀಕ್ಷೆಗೆ ಕೃಷ್ಣಪ್ಪನನ್ನು ಕರೆದುಕೊಂಡು ದಲ್ಲಾಳಿ ಹೊರಟ. "ಈಗ ಬಂದು ಬಿಡುತ್ತೇನೆ ಇಲ್ಲೇ ಇರಿ"

ಎಂತ ನಮಗೆ ಹೇಳಿ ಕೃಷ್ಣಪ್ಪ ದಲ್ಲಾಳಿಯ ಹೆಗಲ ಮೇಲೆ ಕೈ ಹಾಕಿ ಹೊರಟ.

x x x x

ರಾಂಜಿ ಕ್ರಿಕೆಟ್ ಸ್ಕೋರ್, ರೇಷನ್, ಗುಂಡಪ್ಪನ ಹೊಟ್ಲ್ ದೋಸೆ, ಸಿನಿಮಾ ಮುಂತಾದ ಮಹದ್ವಿಷಯಗಳಮೇಲೆ ನಾವು ಚರ್ಚಿಸುತ್ತಾ ವೇಣೂನ ಅಂಗಡಿಯಲ್ಲಿ ಕುಳಿತ್ತಿದ್ದೆವು. ಅಷ್ಟೊತ್ತಿಗೆ ಕೃಷ್ಣಪ್ಪ ಬಂದೇ ಬಿಟ್ಟ. "ಇನ್ನು ಮೇಲೆ ಅವನು ನಿಮ್ಮ ತಂಟೆಗೆ ಬರೋದಿಲ್ಲ" ಅಂದ ಕೃಷ್ಣಪ್ಪ. ವಿಷಯ ತಿಳಿದುಕೊಳ್ಳಲು ನಾವು. ಕುತೂಹಲದಿಂದ ಕೇಳಿದೆವು. "ಏನು ನಡೆಯಿತು ಎಂಬುದನ್ನಿಷ್ಟು ಹೇಳಪ್ಪಾ?" ಕೃಷ್ಣಪ್ಪ ಹೇಳಿದ. ಡಾಕ್ಟರು ಪರೀಕ್ಷೆಮಾಡುವ ಮೊದಲು ಕೆಲವು ಪ್ರಶ್ನೆಗಳನ್ನು ಕೇಳಿದರು. ಅವಕ್ಕೆಲ್ಲಾ ಸರಿಯಾಗಿ ಉತ್ತರಕೊಟ್ಟೆ. ನನ್ನ ಉತ್ತರ ಕೇಳಿ 'ಈ ಕೇಸ್ ತೆಗೆದುಕೊಳ್ಳಲು ಸಾಧ್ಯವಿಲ್ಲ' ಅಂದರು 'ನಿಮಗೆ ಅಕ್ಕ ತಂಗಿಯರೂ ಅಣ್ಣ ತಮ್ಮಂದಿರೂ ಇದ್ದಾರೆಯೇ?' 'ನನಗೆ ಇಬ್ಬರು ಅಕ್ಕಂದಿರಿದ್ದರು, ಇಬ್ಬರು ತಮ್ಮಂದಿರಿದ್ದರು. ಅವರೆಲ್ಲರೂ ಈಗ ಸತ್ತು ಹೋಗಿದ್ದಾರೆ, ಅವರೆಲ್ಲರೂ ಕ್ಷಯದಿಂದ ಸತ್ತರು. ನನಗೂ ಈಚೆಗೆ ಏಕೋ ಬಹಳ ನಿಶ್ಶಕ್ತಿ ಕಾಣಿಸಿಕೊಂಡಿದ್ದರಿಂದ ಇನ್‌ಷೂರ್ ಮಾಡಿಸೋಣ ಅಂತ ಬಂದೆ' ಅಂತ ಹೇಳಿದೆ. ಡಾಕ್ಟರು ಬರೆಯುತ್ತಿದ್ದ ಪೆನ್ ಕೆಳಗಿಟ್ಟರು. ದಲ್ಲಾಳಿ ಬಗಲಲ್ಲಿ ಚೀಲವನ್ನು ಸಿಕ್ಕಿಸಿಕೊಂಡು ಹೊರಟ ಎಂದ. ಕೃಷ್ಣಪ್ಪನ ಬುದ್ಧಿಗೆ ನಾವು ತಲೆದೂಗಿದೆವು.

---

# ಮದುವೆ

ಇದು ನನ್ನ ಮದುವೆಗೆ ಸಂಬಂಧಿಸಿದ್ದಲ್ಲ. ಎಲ್ಲರಿಗೂ ಸಾಮಾನ್ಯವಾಗಿ ಅನ್ವಯಿಸುವುದು. ಹಾಗೆಂದಮಾತ್ರಕ್ಕೆ "ಮನೆಗೆ ಬಾ ಮದುವೆ ಮಾಡಿಸ್ತೀನಿ" ಅಂತಾರಲ್ಲ ಅದಲ್ಲ ಇದು. ನಿಜವಾಗದು. "ಚಕ್ಕವಕ್ಕಿಗಳ ತೆರದಿ" ಗಂಡುಹೆಣ್ಣು ಅನುವಾಗಿರಲು ಮಾಡಿರುವ ಪವಿತ್ರವಾದ ಏರ್ಪಾಟು.

ಪಾಶ್ಚಾತ್ಯರು ಮದುವೆಯೆಂದರೆ ಬೆಚ್ಚಿಬೀಳುತ್ತಾರೆ ಅದೊಂದು ಮಹಾಕಂಟಕವೆಂದು ಅದರಿಂದ ಹೇಗಾದರೂ ಪಾರಾಗಬೇಕೆಂದು ಹವಣಿಸುತ್ತಾರೆ. ಷೇಕ್ಸ್‌ಪಿಯರ್ ಮಹಾಕವಿಯು ಒಂದೆಡೆ "Hanging and wiving go together" (ಮದುವೆಯಾಗುವುದು ನೇಣುಹಾಕಿಕೊಳ್ಳುವುದು ಒಟ್ಟಿಗೆ ಜರುಗುತ್ತವೆ) ಎಂದು ಹೇಳಿದ್ದಾನೆ ಮಹಾಜ್ಞಾನಿ ಸಾಕ್ರೆಟಿಸ್‌ನನ್ನು ಕುರಿತು "ಮದುವೆ ಮಾಡಿಕೊಂಡರೆ ಒಳ್ಳೆಯದೆ ಬಿಟ್ಟರೆ ಒಳ್ಳೆಯದೆ" ಎಂದೊಬ್ಬರು ಪ್ರಶ್ನಿಸಿದಾಗ "ಎರಡರಲ್ಲಿ ಯಾವುದು ಮಾಡಿದರೂ ಕಷ್ಟ ತಪ್ಪದು" ಎಂದು ಹೇಳಿದನಂತೆ. ಒಂದುಸಾರಿ ನನ್ನ ಮಿತ್ರನನ್ನು ಅವನ ದಾಂಪತ್ಯ ಜೀವನದಬಗ್ಗೆ ವಿಚಾರಿಸಿದೆ. ಅವನಿಗೆ ಎರಡು ಮದುವೆಗಳಾಗಿದ್ದರಿಂದ ಅವರ ಅನುಭವ, ಬ್ರಹ್ಮಚಾರಿಯಾದ ನನಗೆ ಅನುಕೂಲವಾಗಬಹುದೆಂದು ಕೇಳಿದೆ. ಅದಕ್ಕವನು ಹೇಳಿದ; "ನನ್ನ ಮೊದಲನೆಯ ಹೆಂಡತಿ ಓಡಿಹೋದಳು; ಬಹಳ ತೊಂದರೆಪಟ್ಟೆ; ಎರಡನೆಯ ಹೆಂಡತಿ ಓಡಿಹೋಗಲೊಲ್ಲಳು ತೊಂದರೆಪಡುತ್ತಿದ್ದೇನೆ."

ಕಾಗದದ ಬರದ ಈ ದಿನಗಳಲ್ಲಿ ಲಗ್ನಪತ್ರಿಕೆಗಳು ಅಚ್ಚಾಗುತ್ತಿದ್ದರೂ ಅವುಗಳ ರೂಪ, ಗಾತ್ರ ಮತ್ತು ಶಬ್ದ ಜೋಡಣೆಯಲ್ಲಿ ಬಹಳ ವ್ಯತ್ಯಾಸವಾಗಿರುತ್ತವೆ. ಮೊದಲಿನಂತೆ [illegible] ಕಾಗದವಿಲ್ಲ. ಗಾತ್ರದಲ್ಲಿಯೂ ಬಹಳ ಮೋಟಾಗಿರುತ್ತವೆ. "ಸಕುಟುಂಬ ಸಪರಿವಾರರಾಗಿ ನಾಲ್ಕುದಿನ ಮುಂಚೆ ಬಂದು ವಧೂವರರನ್ನು ಆಶೀರ್ವದಿಸಿ ನನ್ನ ಮನಸ್ಸನ್ನು

ಸಂತೋಷಪಡಿಸಬೇಕೆಂದು ಕೋರುವ..........." ಈ ಒಕ್ಕಣೆಯ ಸಾಲು ಗಳು ಇತ್ತೀಚಿಗೆ ಕಾಣುವುದೆ ಇಲ್ಲ. ಹಾಗೆ ಬರೆದಲ್ಲಿ ಎಲ್ಲರೂ ಎಲ್ಲಿ ಬಂದು ರ್ಯಾಂಡಾ ಊರಿಬಿಡುವರೋ ಎಂಬ ದಿಗಿಲು.

ಲಗ್ನಪತ್ರಿಕೆ ಕೈಗೆ ಬಂತೆಂದರೆ ಯಾವನೋ ಹೆಣ್ಣು ಹೆತ್ತ ಬಡಪ್ರಾಣಿ ಯೊಬ್ಬನು ಸಾವಿರಾರು ರೂಪಾಯಿಗಳವರೆಗೆ ನಷ್ಟಮಾಡಿಕೊಂಡಿದ್ದಾ ನೆಂಬುದರ ಜಾಹಿರಾತು ಅಥವಾ ಹಸ್ತಪತ್ರಿಕೆಯೆಂದು, ಯಾವ ತಾಪ ತ್ರಯವನ್ನೂ ಅರಿಯದೆ ಓದಿಕೊಂಡಿದ್ದ ಹುಡುಗನೊಬ್ಬನಿಗೆ ಹಣದ ಆಸೆ ತೋರಿಸಿ ಮಸಲತುಮಾಡಿ ಹೆಣ್ಣು ಗಂಟುಹಾಕಿದ ಬಗ್ಗೆ ಎಲ್ಲರಿಗೂ ತಿಳಿಯ ಪಡಿಸುವ ಒಂದು ಪ್ರಕಟಣೆಯೆಂದೂ ಅರ್ಥಮಾಡಬಹುದು.

ಇರಲಿ, ಮೊನ್ನೆ ನನಗೊಂದು ಮದುವೆಯ ಮನೆಗೆ ಆಹ್ವಾನ ಬಂದಿತ್ತು. ನನ್ನ ಸ್ನೇಹಿತನಿಗೂ ಈ ಮದುವೆಗೆ ಆಹ್ವಾನ ಬಂದಿತ್ತು. "ಡಿನ್ನರ್" ಇಷ್ಟುಹೊತ್ತಿಗೆ ಎಂದು ಲಗ್ನಪತ್ರಿಕೆಯಲ್ಲಿ ನಮೂದುಮಾಡಿ ದ್ದರು ಒಂದು ವಿಷಯನೋಡಿ, ಆ ನಿರ್ದಿಷ್ಟವೇಳೆಗೆ ಮುಂಚೆ ನಾವೇ ನಾದರೂ ಹೋದಲ್ಲಿ ಅರ್ಧಚಂದ್ರ ಪ್ರಯೋಗಕ್ಕೆ ಸಿದ್ಧರಾಗಬೇಕಾಗುತ್ತದೆ. ಯಾವನೋ ನಮಗೆ ಪರಿಚಯವಿಲ್ಲದ ಬಿಲ್ಲೆ ಜವಾನನು ಬುಲ್‌ಡಾಗ್‌ನ ಹಾಗೆ ಬಾಗಿಲ ಬಳಿ ಕಾದಿರುತ್ತಾನೆ

ನಾವೇನೋ ಸಮಯಕ್ಕೆ ಸರಿಯಾಗಿಯೇ ಹೋದೆವು. ನಾವು "ಸ್ಟಾಂಡರ್ಡ್ ಟೈಮ್" ಅನುಸರಿಸಿದ್ದೆವು. ಆದರೆ "ಇಂಡಿಯನ್ ಟೈಮ್" ಅನುಸರಿಸುವ ಮಹನೀಯರು ಒಬ್ಬರೂ ಬಂದಿರಲಿಲ್ಲ. ನಾವಿ ಬ್ಬರೇ ಚಪ್ಪರದ ಒಂದು ಮೂಲೆಯಲ್ಲಿ ಕುಳಿತುಕೊಂಡೆವು. ಯಾವನೋ ಒಬ್ಬ ಆಸ್ಥಾನವಿದ್ವಾಂಸನು (ಯಾವಸ್ಥಾನವೊ ಗೊತ್ತಿಲ್ಲ) ಎಲ್ಲರಿಗೂ ಕೇಳಲೆಂದು ಗಟ್ಟಿಯಾಗಿ ಅರಚುತ್ತಿದ್ದನು ಇನ್ನೊಂದು ಮೂಲೆಯಲ್ಲಿ ಪುರೋಹಿತನು ತನ್ನ ಮಂತ್ರವು ಎಲ್ಲರಿಗೂ ಕೇಳಲೆಂದು ಗಟ್ಟಿಯಾಗಿ ಕೂಗುತ್ತಿದ್ದ. ಅವರಿಬ್ಬರ ನಡುವೆ ಒಂದು ಮೇಲಾಟವೇ ನಡೆದಿತ್ತು.

ಸಂಗೀತ ವಿದ್ವಾಂಸನ ಬಳಿ ಬಹಳಜನ ಹುಡುಗರು ಕುಳಿತಿದ್ದರು. "ಈಗಿನಕಾಲದಲ್ಲಿ ಹುಡುಗರಿಗೆ ಸಂಗೀತದಲ್ಲಿ ಎಷ್ಟು ಅಭಿರುಚಿಯಿದೆ ನೋಡು" ಎಂದು ನನ್ನ ಮಿತ್ರನಿಗೆ ಹೇಳಿದೆ. ಅವನು ಹೇಳಿದ: ಬೆಪ್ಪೇ

ಅವರು ಸಂಗೀತ ಕೇಳಲಿಕ್ಕೆ ಬಂದಿಲ್ಲ. ತಬಲಾ ಬಾರಿಸುವವನ ಪಿಳ್ಳು ಜುಟ್ಟು ಹೇಗೆ ಹಾರಾಡುತ್ತಿದೆ ಎಂಬುದನ್ನು ನೋಡಲು ಬಂದಿದ್ದಾರೆ. ಅವನ ಅಂಗವಿನ್ಯಾಸದ ವೈಖರಿಯನ್ನು ಸವಿಯಲು ಬಂದಿದ್ದಾರೆ." ಅವನ ಮಾತುಗಳು ಅಕ್ಷರಶಃ ನಿಜವಾಗಿದ್ದವು. ನಾನೂ ಸಹ ಒಂದುಗಳಿಗೆ ಅದನ್ನೇ ನೋಡುತ್ತಾ ನಿಂತೆ. ನನ್ನ ಸ್ನೇಹಿತ ನನಗೊಂದು ಸವಾಲುಹಾಕಿದ. "ಅಂಗವಿನ್ಯಾಸ ಮಾಡದ ತಬಲಾ ಬಾರಿಸುವವನನ್ನು ನೀನು ತೋರಿಸಿದರೆ ನಿನಗೆ ಅರ್ಧರಾಜ್ಯ ಕೊಟ್ಟು ನನ್ನ ಮಗಳನ್ನು ಮದುವೆ ಮಾಡಿಕೊಡು ತ್ತೇನೆ" ಎಂದು ಹೇಳಿದ. ಅವನಿಗೆ ಯಾವ ರಾಜ್ಯವೂ ಇರಲಿಲ್ಲ. ಮೇಲಾಗಿ ಮಗಳನ್ನು ಕೊಡುವುದಕ್ಕೆ ಅವನಿಗೆ ಮದುವೆಯೇ ಆಗಿರಲಿಲ್ಲ. ಇರಲಿ, ಇದರ ತಾತ್ಪರ್ಯವೇನೆಂದರೆ ಅಂತಹವರು ಸಿಕ್ಕುವುದು ಅತಿ ದುರ್ಲಭ ಎಂಬುದನ್ನು ಪುಷ್ಟೀಕರಿಸಲು ಹೇಳಿದ ಮಾತುಗಳಿವು.

ಮದುವೆಯಲ್ಲಿ ಬಹುಮುಖ್ಯವಾದುದೆಂದರೆ ಗದ್ದಲ. ಯಾರು ಹೆಚ್ಚು ಗದ್ದಲ ಮಾಡುತ್ತಾರೋ ನೋಡಬೇಕೆಂದು ಒಂದು ಸ್ಪರ್ಧೆ ಏರ್ಪಡಿಸಿದಂತಿರುತ್ತೆ. ಮಂತ್ರ ಹೇಳುವ ಬ್ರಾಹ್ಮಣರು, ಓಲಗದವರು, ಸಂಗೀತಕಚೇರಿಯವರು, ಎಳೆಯ ಮಕ್ಕಳು ಈ ಸ್ಪರ್ಧೆಯ ಪ್ರಮುಖ ಪಾತ್ರಧಾರಿಗಳು. ಮದುವೆಗಳಲ್ಲಿನ ಇನ್ನೊಂದು ಔಚಿತ್ಯವೆಂದರೆ ಕೆಲಸಮಾಡದಿರುವುದು. ಎಲ್ಲರೂ "ಭಿನ್ ಜವಾಬ್ದಾರಿ, ನಾಕ್ಸಹಾಯ" ಎಂಬ ತತ್ವವನ್ನೇ ಪ್ರತಿಪಾದಿಸುವವರಾಗಿರುತ್ತಾರೆ. ಸುಮ್ಮನೆ ಅತ್ತಿಂದ ಇತ್ತ, ಇತ್ತಿಂದ ಅತ್ತ ಸಡಗರದಿಂದ ತಿರುಗಾಡುತ್ತಿರುವುದೆ ಎಲ್ಲರ ಮುಖ್ಯ ಕೆಲಸ.

ಮದುವೆಗಳಲ್ಲಿ ಮುದುಕರಿಗೆ ಬಹಳ ಗೋಳು. ಮೊಮ್ಮಕ್ಕಳನ್ನೋ ಅಥವಾ ಬೇರೆ ಅಳುವ ಮಕ್ಕಳನ್ನೋ ಆಡಿಸುವಕೆಲಸ ಅವರಮೇಲೆ ಬಿದ್ದಿರುತ್ತೆ. ನಶ್ಯದಡಬ್ಬಿ, ಬಾಳೆಎಲೆ ಪೀಪಿ ಇವುಗಳಿಂದ ಏನುಮಾಡಿದರೂ ಸುಮ್ಮನಾಗದ ಆ ಅಳುವ ಮಕ್ಕಳನ್ನು ಸಮಾಧಾನಪಡಿಸುವ ಕೆಲಸ ಇವರ ಮೇಲೆ ಬಿದ್ದಿರುತ್ತೆ. ಆ ಹಾಳು ಮಕ್ಕಳು ತಮ್ಮ ವ್ಯಕ್ತಿತ್ವವನ್ನು ಸಮರ್ಥಿಸಲು ಗಟ್ಟಿಯಾಗಿ – ಚೀರಿ ಅಳುತ್ತಿರುತ್ತವೆ. "ಹಾಳು ವೆಂಕಮ್ಮನ ಮಗು ವಿಪರೀತ ಅಳುತ್ತೆ" ಎಂದರೆ, ಆ ಮಗುವಿಗೆ ಏನೋ ಸಮಾಧಾನ!

ಮದುವೆಯಲ್ಲಿ ಪ್ರಧಾನ ವ್ಯಕ್ತಿಗಳಾರು ಎಂಬುದೊಂದು ಬಹು ದೊಡ್ಡ

ಪ್ರಶ್ನೆ. ಕೆಲವರು ಮದುಮಕ್ಕಳೆಂದೂ, ಕೆಲವರು ಬಿಯ್ಯಗರೆಂದೂ ವಾದಿಸುತ್ತಾರೆ. ಆದರೆ ನನ್ನ ಅನುಭವದಿಂದ ಸೋದರತ್ತೆ ಎಂದು ಹೇಳದಿರಲಾರೆ. ಈಕೆ ಇನ್ನು ಸ್ವಲ್ಪ ದಿನಗಳಲ್ಲಿಯೇ ಶತಮಾನೋತ್ಸವವನ್ನು ಮಾಡಿಕೊಳ್ಳಲು ಹವಣಿಸುತ್ತಿರುತ್ತಾಳೆ. ಈಕೆಯ ಆಣತಿಯನ್ನು ಮೀರುವುದು ಯಾರಿಂದಲೂ ಸಾಧ್ಯವಿಲ್ಲ. ಯಾವುದಕ್ಕೂ "ನಮ್ಮ ಮನೆ ಸಂಪ್ರದಾಯ ಹೀಗಿದೆ" ಎಂದಕೂಡಲೇ ಎಲ್ಲರೂ ತೆಪ್ಪಗಾಗಬೇಕು. ಯಾರ ಮಾತೂ ನಡೆಯುವ ಹಾಗಿಲ್ಲ. ಪುರೋಹಿತನು ಶಾಸ್ತ್ರಾಧಾರ ತೋರಿಸಿ ಏನಾದರೂ ಮಾಡಬೇಕೆಂದು ಹೇಳಿದರೂ ಈ ಸೋದರತ್ತೆಯ ಮಾತಿಗೆ ಅವನು ತಲೆಬಾಗಬೇಕು.

ಒಂದು ವಿಷಯ, ಮದುವೆ ಸಂಭ್ರಮಗಳಲ್ಲಿ ಒಬ್ಬೊಬ್ಬರ ಮನೋವೃತ್ತಿ ಒಂದೊಂದು ತರಹೆಯಾಗಿರುತ್ತೆ. ಒಬ್ಬೊಬ್ಬರು ಒಂದೊಂದನ್ನು ಆಲೋಚಿಸುತ್ತಿರುತ್ತಾರೆ. ಮದುಮಗನು ತಾನು ಎಲ್ಲಿ ಟೋಪಿ ಬಿದ್ದೆನೋ ಎಂದೂ, ತನ್ನ ಮಾವನು ಬಣ್ಣಿಸಿದ ರೂಪಲಾವಣ್ಯಗಳು ತನ್ನ ಮಡದಿಯಲ್ಲಿ ಇವೆಯೋ ಇಲ್ಲವೋ ಎಂದೂ ಕಡೆಗಣ್ಣಿನಿಂದ ನೋಡುತ್ತಿರುತ್ತಾನೆ. ಆದರೆ ಆ ನವವಧುವು ನಾಚಿಕೆಯಿಂದಲೋ ಅಥವಾ ಇವನ ಇಂಗಿತವನ್ನರಿತೋ ಮೊಣಕಾಲು ಸಂದಿಯಲ್ಲಿ ತಲೆ ಮರೆಸಿಕೊಂಡು ಗೋಳು ಹುಯ್ಯುಕೊಳ್ಳುತ್ತಾಳೆ. ವಧುವಿನ ಆಕಾಂಕ್ಷೆಯೆಂದರೆ ತನ್ನ ಗಂಡನ ಬೆನ್ನಿಗೆ ಗುಬ್ಬಿ ಬಾಳೆಯನ್ನು ಯಾವಾಗ ಹೊಡೆದೇನೋ ಎಂದು ಕಾದಿರುತ್ತಾಳೆ. ಭೋಜನಪ್ರಿಯರು, ಸಂಗೀತಪ್ರಿಯರು, ರಸಿಕರು, ಮತ್ತು ಕಾಫೀ ಪ್ರಿಯರು ತಮ್ಮ ತಮ್ಮ ವಸ್ತುಗಳನ್ನು ಹುಡುಕಿಕೊಂಡು ಹೊರಟಿರುತ್ತಾರೆ.

ಒಟ್ಟಿನಲ್ಲಿ ಮದುವೆಯ ಉದ್ದೇಶ, ನಂಟರು ಇಷ್ಟರು ಮುಂತಾದವರು ಕಲೆಯುವುದು. ನಮ್ಮನ್ನು ನಾವು ಮರೆಯುವುದೇ ನಮ್ಮ ಜೀವನದಲ್ಲಿನ ರಸನಿಮಿಷ. ಹಾಗೆ ಮರೆಯುವುದಕ್ಕೆ ಮದುವೆಯ ಸಂಭ್ರಮ ಒಂದು ಸಾಧನ. ಮದವೆಯ ನಾಲ್ಕು ದಿವಸ ನಾವು ಯಾವುದೋ ಒಂದು ಕಾಲ್ಪನಿಕ ಜಗತ್ತಿನಲ್ಲಿರುತ್ತೇವೆ. ನಮ್ಮ ತಾಪತ್ರಯ, ಕಷ್ಟಸುಖಗಳು ಎಲ್ಲವನ್ನೂ ಈ ಉತ್ಸವ ಸಮಯದಲ್ಲಿ ಮರೆತುಬಿಡುತ್ತೇವೆ. ಮದುವೆಗಳು ಜರುಗುತ್ತಿರಲಿ, ನಾವು ಹೋಗೋಣ, ನಮ್ಮನ್ನು ನಾವು ಮರೆಯೋಣ!

# ಪರಧ್ಯಾನತೆಯ ಪ್ರಸಂಗಗಳು

ಅಧ್ಯಾಪಕರು ಮರೆವು ಅಥವಾ ಪರಧ್ಯಾನತೆಯನ್ನು ಬಹು ಕಷ್ಟಪಟ್ಟು ಸಾಧಿಸಿದ್ದಾರೆ. ಅಧ್ಯಾಪಕರ ಈ ವಿಶೇಷ ಗುಣವು ಬರಹಗಾರರಿಗೂ, ಕುಚೋದ್ಯಗಾರರಿಗೂ ವಿಷಯಗಳನ್ನು ಹೇರಳವಾಗಿ ಒದಗಿಸಿದೆ. ನನ್ನ ಪಾಲಿಗೆ ಸಿಕ್ಕಿರುವ ಕೆಲವು ವಿನೋದ ಪ್ರಸಂಗಗಳನ್ನು ಉಲ್ಲೇಖಿಸಿದ್ದೇನೆ.

ಸಾಮಾನ್ಯವಾಗಿ ಅಧ್ಯಾಪಕರು ಈ ಒಂದು ವಿಶಿಷ್ಟ ಗುಣದಿಂದಲೇ ಬಹುಮಟ್ಟಿಗೆ ಬೆಳಕಿಗೆ ಬಂದಿದ್ದಾರೆ. ಇಲ್ಲದಿದ್ದರೆ ಅವರೂ ಸಹ, ತಾಲ್ಲೂಕು ಕಚೇರಿಯ ಗುಮಾಸ್ತರು, ಅಂಗಡಿಕಾರರು ಮುಂತಾದ ಇತರ ಪ್ರಾಣಿಗಳಂತೆ ಅನಾಮಧೇಯರಾಗಿಯೇ ಉಳಿಯುತ್ತಿದ್ದರು.

x x x x

ಶಾಲೆಯಲ್ಲಿ ಹಾಜರಿ ತೆಗೆದುಕೊಳ್ಳುವ ಸಮಯ. ಹುಡುಗರು ವಿಪರೀತ ಗಲಾಟೆ ಮಾಡುತ್ತಿದ್ದರು. ಶಿಕ್ಷಕನಿಗೆ (ಶಿಕ್ಷಿಸುವವನಿಗೆ ಶಿಕ್ಷಕನೆಂದು ಹೆಸರು) ವಿಪರೀತ ಸಿಟ್ಟು ಬಂದಿತು ಗುಡುಗುದನಿಯಿಂದ ಗುಡುಗಿದ "ಪ್ರೆಸೆಂಟ್ ಆದವರು ಪ್ರೆಸೆಂಟ್ ಅನ್ನಿ, ಆಬ್ಸೆಂಟ್ ಆದವರು ಆಬ್ಸೆಂಟ್ ಅನ್ನಿ." ಕಡೆಯ ಬೆಂಚಿನಲ್ಲಿ ಕುಳಿತಿದ್ದ ಹುಡುಗನೊಬ್ಬನು ಕೇಳಿದ "ಆಬ್ಸೆಂಟ್ ಆದವನು ಆಬ್ಸೆಂಟ್ ಅಂತ ಹೇಗೆ ಹೇಳುವುದು ಸಾರ್?"

ಹುಡುಗನ ಪ್ರಶ್ನೆಗೆ ಉಪಾಧ್ಯಾಯರಿಂದ ಉತ್ತರವು ಎರಡು ಏಟುಗಳ ರೂಪದಲ್ಲಿ ದೊರೆಯಿತು.

x x x x

ಒಂದು ಸಾರಿ ಪ್ರೊಫೆಸರ್ ಒಬ್ಬರು ಪರಧ್ಯಾನತೆಯಲ್ಲಿ ಲೀನರಾಗಿದ್ದರು. ಅವರ ಹೆಂಡತಿಗೆ ಗಂಡನ ವರ್ತನ ಸರಿಬೀಳಲಿಲ್ಲ. ಆಕೆ ಗಂಡ

ಗಂಡನನ್ನು ಕೇಳಿದರು. "ಏನೂ ಅಂದ್ರೆ, ಮೂರು ದಿನವಾಯಿತು ನನ್ನನ್ನು ಒಂದು ಸಾರಿ ಕೂಡ ಚುಂಬಿಸಲಿಲ್ಲವಲ್ಲ?" ಪ್ರೊಫೆಸರ್ ತಲೆಯೆತ್ತಿ, "ಇರಬಹುದು, ಆದರೆ ಈ ಮೂರು ದಿನಗಳಿಂದ ನಾನು ಚುಂಬಿಸುತ್ತಿದ್ದ ಸ್ತ್ರೀಯಾರೆಂಬುದನ್ನು ಹೇಳಬಲ್ಲೆಯಾ?" ಎಂದು ಕೇಳಿದರು ಪ್ರೊಫೆಸರ ಹೆಂಡತಿಯು ದಾಂಪತ್ಯ ವಿಚ್ಛೇದನಕ್ಕೆ ಅರ್ಜಿ ಹಾಕಿಕೊಂಡಳೆಂದು ನಾವು ಬರೆಯುವ ಅಗತ್ಯವಿಲ್ಲವಷ್ಟೆ?

x x x x

ಕಾಲೇಜಿನ ಲೆಕ್ಚರರ್ ಒಬ್ಬರು, ಸ್ನಾನಮಾಡಿ ಕ್ರಾಪ್ ಬಾಚಿಕೊಳ್ಳಲು ಕನ್ನಡಿಯ ಮುಂದೆ ನಿಂತುಕೊಂಡರು. ಹತ್ತು ನಿಮಿಷವಾಯಿತು, ಅರ್ಧ ಗಂಟೆಯಾಯಿತು, ಒಂದು ಗಂಟೆಯಾಯಿತು, ಎರಡು ಗಂಟೆಯಾಯಿತು. ಕನ್ನಡಿಯನ್ನು ನೋಡುತ್ತಲೇ ನಿಂತುಕೊಂಡಿದ್ದಾರೆ. ಅವರ ಹೆಂಡತಿ ಅಡಿಗೆ ಮಾಡಿಕೊಂಡು ಕಾದು ಕಾದು ಬೇಸತ್ತು ಹೋದರು. ಅಕಸ್ಮಾತ್ ಯಾವುದೋ ಕೆಲಸದ ನಿಮಿತ್ತ ಅವರು ಕೋಣೆಗೆ ಬಂದರು. ಗಂಡನು ಕನ್ನಡಿಯನ್ನು ಎವೆಯಿಕ್ಕದೆ ನೋಡುತ್ತಿರುವುದನ್ನು ನೋಡಿ ಆಕೆಗೆ ಬಹಳ ಆಶ್ಚರ್ಯವಾಯಿತು. "ಇದೇನು ಹೀಗೇಕೆ ನಿಂತಿದ್ದೀರಿ, ಊಟಕ್ಕೆ ಬರುವುದಿಲ್ಲವೆ?" ಆಕೆ ಒಟಗುಟ್ಟಿದಳು. "ನೋಡು, ಆ ಮನುಷ್ಯನನ್ನು ಎಲ್ಲಿಯೋ ನೋಡಿದ ಜ್ಞಾಪಕವಿದೆ. ಆದರೆ ಅವನನ್ನು ಎಲ್ಲಿ ನೋಡಿದ್ದೇನೆಂಬುದನ್ನು ಪತ್ತೆಹಚ್ಚಲು ಸಾಧ್ಯವಾಗಿಲ್ಲ" ಎಂದು ಹೇಳಿದರು. ಹೆಂಡತಿಗೆ ಈ ಮಾತುಗಳನ್ನು ಕೇಳಿ ಆಶ್ಚರ್ಯವಾಯಿತು. ಆದರೆ ಆಶ್ಚರ್ಯಪಡುವುದಕ್ಕಿಂತ ಹೆಚ್ಚಾಗಿ ಆಕೆ ಏನನ್ನೂ ಮಾಡಲು ಅಸಮರ್ಥಳಾದಳು.

x x x x

ಒಂದು ದಿನ ಅಧ್ಯಾಪಕರೊಬ್ಬರು ಹವಾ ಸೇವನೆಗೆಂದು ಸಾಯಂಕಾಲ ಊರು ಹೊರಗೆ ಹೊರಟಿದ್ದರು. ಬಯಲಿನಲ್ಲಿ ಮೇಯುತ್ತಿದ್ದ ಒಂದು ಹಸುವಿಗೆ ಢಿಕ್ಕಿ ಹೊಡೆದರು. ಕೂಡಲೆ ನಡೆದ ಪ್ರಮಾದವನ್ನು ತಪ್ಪಿಸಲು (ಅವರು ಯಾರೋ ಹೆಂಗಸಿಗೆ ಢಿಕ್ಕಿ ಹೊಡೆದರೆಂದು ಭಾವಿಸಿಕೊಂಡು) "ಅಮ್ಮಾ ದಯವಿಟ್ಟು ಕ್ಷಮಿಸಿ, ನಾನು ಎಲ್ಲಿಯೋ ನೋಡುತ್ತ

ನಿಮಗೆ ಢಿಕ್ಕಿ ಹೊಡೆದೆ" ಎಂದರು. ತಾವು ಢಿಕ್ಕಿ ಹೊಡೆದುದು ಹೆಂಗಸಲ್ಲವೆಂದೂ, ಅದೊಂದು ಹಸುವೆಂದು ತಿಳಿದ ಕೂಡಲೇ ನಾಚಿಕೆಯಿಂದ ಮುಖವನ್ನು ಕೆಳಕ್ಕೆ ಮಾಡಿಕೊಂಡು (ಅನೇಕರು ನಾಚಿಕೆಯಾದಾಗ ಮಾಡುವುದೇ ಹಾಗೆ) ಹೊರಟು ಹೋದರು.

ಇನ್ನೊಂದು ದಿನ ಸಾಯಂಕಾಲ ಅಧ್ಯಾಪಕರು ಹವಾ ಯಾತ್ರೆಗೆ ಹೊರಟಿದ್ದಾಗ ಅವರ ತಲೆ ಒಂದು ಕಟು ಸಮಸ್ಯೆಯನ್ನು ಬಿಡಿಸುವುದರಲ್ಲಿ ತೊಡಗಿತ್ತು. ಹಾಗೆಯೇ ಹೋಗುತ್ತ ಅಕಸ್ಮಾತ್ತಾಗಿ (ಇಂತಹ ಕೈ ಮಿಕ್ಕಿ ಹೋದ ಪ್ರಸಂಗಗಳೆಲ್ಲಾ ಅಕಸ್ಮಾತ್ತಾಗಿಯೇ ಸಂಭವಿಸುವುದು) ಒಬ್ಬ ಹೆಂಗಸಿಗೆ ಢಿಕ್ಕಿ ಹೊಡೆದರು. ಪ್ರೊಫೆಸರು ಸಿಟ್ಟಿನಿಂದ ಗುಡುಗಿದರು "ವಾರಸುದಾರರಿಲ್ಲದ ಈ ಹಸುಗಳನ್ನೆಲ್ಲಾ ದೊಡ್ಡಿಗೆ ಹಾಕಬೇಕು" ಆ ಹೆಂಗಸು ಪ್ರೊಫೆಸರರ ಮೇಲೆ ಬೈಗಳದ ಮಳೆಯನ್ನಾರಂಭಿಸಿದಳು. ನೀವು ರೈಲು ರೇಲ್ವೆ ಸೇತುವೆಯ ಕೆಳಗಡೆ ನಿಂತಾಗ, ಮೇಲ್ಗಡೆ ವೇಗವಾಗಿ ರೈಲು ಓಡುತ್ತಿದ್ದರೆ ಯಾವ ಶಬ್ದ ಕೇಳಿಬರುತ್ತದೆಯೋ, ಈ ಬೈಗಳದ ಧಾಟಿ ಯಾದರೂ ಹೀಗೆಯೆ ಇರುತ್ತೆ.

ಬ್ರಿಟಿಷ್ ಯುದ್ಧ ಹಡಗನ್ನು ನೋಡಿದ ಜರ್ಮನ್ ಸಬ್‌ಮರೈನ್ ನಂತೆ ಪ್ರೊಫೆಸರರು ಪಲಾಯನ ಸೂಕ್ತವನ್ನು ಪಠಿಸಿದರು.

x x x x

ಒಬ್ಬ ತರುಣ ಡಾಕ್ಟರನ ಪರಧ್ಯಾನತೆಯ ಪ್ರಸಂಗವೊಂದು ಹೀಗಿದೆ.

ಒಬ್ಬ ತರುಣ ಡಾಕ್ಟರನ ಮದುವೆ. ಮೆರವಣಿಗೆಯ ಸಮಯ. ಗಂಡ ಹೆಂಡಿರು ಕೈ ಹಿಡಿದುಕೊಳ್ಳಬೇಕೆಂದು ವರನ ಮತ್ತು ವಧುವಿನ ಬಂಧು ಮಿತ್ರರು ಆಗ್ರಹ ಮಾಡಿದರು. ಡಾಕ್ಟರು (ವರ) ವಧುವಿನ ಕೈ ಹಿಡಿದ ಹಾಗೆಯೇ ನಾಡೀ ಪರೀಕ್ಷೆ ಮಾಡಿದರು. ಆ ಕಸಬುದಾರಿಕೆಯ ಗುಣವೆಲ್ಲಿ ಹೋಗಬೇಕು! ಥಟ್ಟನೆ ಹೇಳಿದರು "ಎಲ್ಲಿ, ನಾಲಗೆ ತೆಗೆಯಮ್ಮ ನೋಡೋಣ?" ಜನಸಂದಣಿ ಘೊಳ್ಳೆಂದಿತು.

x x x x

ನನ್ನ ಸ್ನೇಹಿತ ನಾರಾಯಣರಾಯ ಸಿಗರೇಟ್ ಸೇದುವುದರಲ್ಲಿ ಅಗ್ರ

ಗಣ್ಯ. ದಿನಕ್ಕೆ ೫-೬ ಪ್ಯಾಕ್ ಸಿಗರೇಟ್‌ಗಳನ್ನು ಭಸ್ಮೀಭೂತವಾಗಿ ಮಾಡಿಬಿಡುತ್ತಾನೆ.

ಚಿಕ್ಕಂದಿನಲ್ಲಿ ಇವನು ಬೀಡಿ, ಸಿಗರೇಟ್, ಯಾವುದನ್ನೂ ಸೇದು ತ್ತಿರಲಿಲ್ಲ. ಮನೆಯಲ್ಲಿ ಬರೀ ನೀರು ಸೇದುಕೊಂಡಿದ್ದ. ಆದರೆ ದುಸ್ಸಹ ವಾಸದಿಂದ (ನಮ್ಮ ಮನೆಯವರು ಬೇರೆ ಹುಡುಗರಿಗೆ ಕೊಡುವ ಹೆಸರು ಮತ್ತು ಬೇರೆಯವರು ನಮಗೆ ಕೊಡುವ ಹೆಸರು) ಸಿಗರೇಟ್ ಸೇದುವುದನ್ನು ಅಭ್ಯಸಿಸಿದ. ಇವನಿಗೆ ಒಂದು ಸಾರಿ ವಿಪರೀತ ಕಾಹಿಲೆಯಾಯಿತು. ಕೊನೆಗೆ ಆಸ್ಪತ್ರೆಗೆ ಸಾಗಿಸಿದರು ಅಂತೂ ಬದುಕಿದ. ನಾರಾಯಣ ರಾಯನ ಹೆಂಡತಿಯ ಮನೆಯವರು ಹುಡುಗಿಯ ಮಾಂಗಲ್ಯ ಗಟ್ಟಿಯಾಗಿ ದ್ದರಿಂದ ಬದುಕಿದನೆಂದೂ, ಅವನ ಮನೆಯವರು, ಅವನ ತಾಯಿಯ ಪುಣ್ಯದಿಂದ ಬದುಕಿದನೆಂದೂ, ಇನ್ನು ಕೆಲವರು ಡಾಕ್ಟರ ಹಸ್ತಗುಣದಿಂದ ಬದುಕಿದನೆಂದೂ, ಅವನು ಬದುಕಿಕೊಂಡಿದ್ದಕ್ಕೆ ವಿವರಣೆಗಳನ್ನು ಕೊಟ್ಟರು.

ಈ ಭಿನ್ನ ಭಿನ್ನವಾದ ವಿವರಣೆಗಳಿಂದ ಅವನು ನಿಜವಾಗಿಯೂ ಏತರಿಂದ ಬದುಕಿದ ಎಂಬುದು ತಿಳಿಯದಾಗಿದೆ. ಒಟ್ಟಿನ ಮೇಲೆ, ಬದುಕ ಬಾರದಾಗಿತ್ತು, ಬದುಕಿದ.

ರಾಯ ಕಾಹಿಲೆಯಿದ್ದಾಗ ಒಂದು ದಿನ ಎಂದಿನಂತೆ ನರ್ಸ್ ಬಂದು ಇವನ ಬಾಯಿಯಲ್ಲಿ ಥರ್ಮಾಮೀಟರ್ ಇಟ್ಟಳು. ನಾರಾಯಣರಾಯ ಕೂಡಲೇ ಹೇಳಿದ "ಬರಿ ಸಿಗರೇಟ್ ಬಾಯಲ್ಲಿ ಇಟ್ಟರೇ ಆಯಿತೆ, ಬೆಂಕಿ ಕಡ್ಡಿ ಗೀರಿ" ಎಂದ.

x x x x

ಹೀಗೆ ಪರಧ್ಯಾನತೆ ಒಂದು ಅಂಟು ಜಾಡ್ಯದಂತೆ ಎಲ್ಲೆಲ್ಲಿಯೂ ಆವರಿಸಿದೆ. ಅದನ್ನು ಬಡಿದೋಡಿಸುವ ಚಿಕಿತ್ಸೆ ನಿಮಗಾದರೂ ತಿಳಿದಿದ್ದರೆ ದಯವಿಟ್ಟು ನನಗೆ ಬರೆಯುವಿರಾ ?

# ಕ್ಯಾಲೆಂಡರುಗಳು

ಮಾನವನ ನಾಗರೀಕತೆಯ ಇತಿಹಾಸದಲ್ಲಿ ಕ್ಯಾಲೆಂಡರುಗಳು ಗಣನೀಯವಾದ ಪಾತ್ರವನ್ನು ವಹಿಸಿವೆ. ಯಂತ್ರಗಳಿಂದ ತಯಾರಿಸಲ್ಪಟ್ಟ ಪದಾರ್ಥಗಳನ್ನು ಹೆಚ್ಚುಹೆಚ್ಚಾಗಿ ಉಪಯೋಗಿಸುವುದರಿಂದಲೇ ನಾಗರೀಕತೆಯ ಚೀಟಿ (Label) ಯನ್ನು ಅಂಟಿಸಿಕೊಳ್ಳಲು ಅರ್ಹತೆ ಪಡೆದಂತಾಗುತ್ತೆ. ಇಲ್ಲವಾದರೆ ಅವರು ಸಂಪ್ರದಾಯ ಶರಣರೆಂದೂ ಗೊಡ್ಡುಗಳೆಂದೂ ಕರೆಯಲ್ಪಡುವರು. ಇಂತಹ ನಾಗರೀಕತೆಗೆ ಅರ್ಹತೆಕೊಡುವ ಯಂತ್ರದ ಸಾಮಾನುಗಳನ್ನು ಜಾಹೀರಮಾಡುವ ಸಾಧನಗಳಲ್ಲಿ ಕ್ಯಾಲೆಂಡರ್ ಒಂದಾಗಿದೆ.

ಈ ಕ್ಯಾಲೆಂಡರ್‌ಗಳಲ್ಲಿ ಸ್ತ್ರೀಯರ ಮುಖಗಳನ್ನು ಅಚ್ಚುಹಾಕಿಸುವವರೇ ಹೆಚ್ಚುಜನ. ಜಪಾನ್ ಸೇಫ್ಟೀ ರೇಜರ್ ಸೆಟ್‌ನ ಒಂದು ಪೆಟ್ಟಿಗೆಯ ಮೇಲೆ ಹೆಂಗಸೊಬ್ಬಳ ಚಿತ್ರವನ್ನು ಅಚ್ಚು ಹಾಕಿದ್ದನ್ನು ಸಹ ನೋಡಿದ್ದೇನೆ. ಆ ಸೇಫ್ಟೀ ರೇಜರ್ ಉಪಯೋಗಿಸಿದಲ್ಲಿ ಚಿತ್ರದಲ್ಲಿರುವ ಹೆಂಗಸಿನ ಕೆನ್ನೆಗಳಂತೆ ನಮ್ಮ ಕೆನ್ನೆಗಳು ಕೂಡಾ ನುಣುಪಾಗುವವೋ ಏನೋ ಎಂದು ನಾನು ಆ ಸೆಟ್ ಕೊಂಡೆ. ಆದರೆ ನಾನು ಊಹಿಸಿದಂತಹ ಪರಿಣಾಮ ದೊರೆಯಲಿಲ್ಲ.

ಹೆಂಗಸರು ಉಪಯೋಗಿಸದೆ ಇರುವ ಸಾಮಾನುಗಳನ್ನು ಜಾಹೀರಮಾಡುವಾಗ ಸಹ ಹೆಂಗಸರ ಭಾವಚಿತ್ರಗಳನ್ನು ಅಚ್ಚುಹಾಕಿಸುತ್ತಾರೆ. ಸುರ ಸುಂದರಿಯೊಬ್ಬಳು ಒಂದು ಉಪ್ಪರಿಗೆಯ ಮನೆಯ ಬಿಸಿಲು ಮಚ್ಚಿನಲ್ಲಿ ಕುಳಿತಿದ್ದಾಳೆ. ಅಷ್ಟು ದೊಡ್ಡ ಮನೆಯಲ್ಲಿ ವಾಸಮಾಡುವ ಹೆಂಗಸು ಶ್ರೀಮಂತಳೇ ಇರಬೇಕು. ಹೊಸದಾಗಿ ಒಂದು ಬೆಳ್ಳಿ ಬಂಗಾರದ ಅಂಗಡಿಯನ್ನು ಆರಂಭಿಸಲು ಸಾಕಾಗುವಷ್ಟು ನಗಗಳನ್ನು ಹೇರಿಕೊಂಡಿದ್ದಾಳೆ. ಅವಳ ಒಂದು ಕೈಯಲ್ಲಿ ಒಂದು ಕಟ್ಟು ಜಾಡೀಬೀಡಿ ಇದೆ. ಇನ್ನೊಂದು

ಕೈಯ್ಯಲ್ಲಿ ಉರಿಯುತ್ತಿರುವ ಒಂದು ಬೀಡಿ ಇದೆ. ಮೂವತ್ತೆರಡು ಹಲ್ಲು ಗಳು ಕಾಣುವಂತೆ ಬಾಯಿ ಬಿಟ್ಟಿದ್ದಾಳೆ. ವರ್ತುಲಾಕಾರದಲ್ಲಿ ಬೀಡಿಯು ಹೊಗೆ ನೀಲಗಗನವನ್ನಡರುತ್ತಿದೆ. ಇದೆಲ್ಲಾ ಬಹಳ ಚೆನ್ನಾಗಿ ನಿರೂಪಿತ ವಾಗಿದೆ. ಆದರೆ ಈ ಹೆಂಗಸು ಜಾಡೀಬೀಡಿ ಸೇದುವ ಕೆಳಮಟ್ಟಕ್ಕೆ ಬಂದುದರ ರಹಸ್ಯ ನನಗಿನ್ನೂ ತಿಳಿದಿಲ್ಲ.

ಪಂಚೆಗಳ ಜಾಹೀರಾತು ಮಾಡುವ ಕ್ಯಾಲೆಂಡರ್‌ಗಳ ಮೇಲೂ ಹೆಂಗಸರ ಚಿತ್ರಗಳಿರುತ್ತವೆ. ಗಂಡಸರ ಪಂಚೆಗೂ ಹೆಂಗಸರ ಚಿತ್ರಕ್ಕೂ ಯಾವ ಸಂಬಂಧವಿದೆಯೋ ನಾನು ಕಾಣೆ.

ಕೆಲವು ಸಾರಿ ಹೆಸರಾಂತ ನಟಿಯರ ಚಿತ್ರಗಳು ಮೈಗೆ ಹಾಕಿ ಕೊಳ್ಳುವ ಸಾಬೂನಿನ ಪೆಟ್ಟಿಗೆಗಳ ಮೇಲಿರುವುದನ್ನು ನೋಡಿದ್ದೇನೆ. ಆ ಸಾಬೂನಿನ ಬೆಲೆ ಮೂರಾಣೆಗಿಂತ ಹೆಚ್ಚಾಗಿರುವುದಿಲ್ಲ. ಸಾವಿರಾರು ರೂಪಾಯಿ ಸಂಬಳ ತೆಗೆದುಕೊಳ್ಳುವ ಆ ನಟಿಯರು ಈ ಮೂರಾಣೆ ಸಾಬೂನುಗಳನ್ನು ಬಳಸುತ್ತಾರೆಯೇ? ಆ ನಟಿಯೇ ಸ್ವಹಸ್ತದಿಂದ ಬರೆ ದಿರುವ ಆ ಸಾಬೂನಿನ ದಿವ್ಯಗುಣಗಳು, ಆಕೆಯು ಮೈ ಚರ್ಮ ಮುಖಮುಲ್ಲಿನ ಹಾಗೆ ಮೃದುತ್ವ ಹೊಂದಲು ಆ ಸಾಬೂನಿನ ವಿಪುಲ ನೊರೆಯೇ ಕಾರಣ, ಆಕೆಯು ಹೊಳೆವ ಕಣ್ಣುಗಳಿಗೆ ಆ ಸಾಬೂನಿನ ವೈದ್ಯಕೀಯ ಮೂಲಿಕೆಗಳ ಪರಿಣಾಮ, ಇವನ್ನೆಲ್ಲಾ ಹೊಗಳಿ ಆಕೆ ತನ್ನ ರುಜು ಹಾಕಿರುತ್ತಾಳೆ. ಈ ಜಾಹೀರಾತನ್ನೋದಿದ ನಾನು ಕೊಂಚ ಮಾಸಲು ಕಪ್ಪಾದ ನನ್ನ ಹೆಂಡತಿಯು ಮೈ ಬಣ್ಣ ಬಿಳಿ ಛಾಯೆಯುದಾಗಲೆಂದೂ, ಆಕಯು ಮೈ ಚರ್ಮ ಮುಖಮುಲ್ಲಿನ ಮೃದುತ್ವ ಹೊಂದಲೆಂದೂ, ಆಕೆಯು ಕಣ್ಣುಗಳು ಆ ನಟಿಯು ಕಣ್ಣುಗಳಂತೆ ಫಳಫಳನೆ ಹೊಳೆಯುವಂತಾಗಲೆಂದೂ, ಮೂರು ಸಾಬೂನು ಬಿಲ್ಲೆಗಳ ಒಂದು ಪೆಟ್ಟಿಗೆಯನ್ನೇ ಕೊಂಡುಕೊಟ್ಟೆನು. ನನಗೆ ಒಂಬತ್ತಾಣೆ ತಿರುಪತಿ ಆದುದರ ವಿನಾ ಇನ್ನಾವ ಒಳ್ಳೆಯ ಪರಿಣಾಮವೂ ಉಂಟಾಗಿಲ್ಲವೆಂದೂ ವಿಷಾದದಿಂದ ಹೇಳಬೇಕಾಗಿದೆ.

ಮೊನ್ನೆ ತಾನೇ ಬೊಂಬಾಯಿಯಿಂದ ಪ್ರಯಾಣ ಮಾಡಿ ನುಗ್ಗಾಗಿ ಬಂದ ನನ್ನ ಸ್ನೇಹಿತನೊಬ್ಬನನ್ನು (ಈತ ಅನೇಕ ತಾರತಾರೆಯರ ಪರಿ ಚಯವುಳ್ಳವನು) ನಟಿಯರ ಆ ಕಡಿಮೆ ತರಗತಿಯ ಸಾಬೂನು ಬಳಸುವ

ದುಂಟೆ. ಅವರ ಮೈ ಚರ್ಮ ಮುಖಮಲ್ಲಿನಂತೆ ಮೃದುವಾಗಿರುವುದಕ್ಕೂ, ಅವರ ಕಣ್ಣುಗಳು ಫಳಫಳನೆ ಹೊಳೆಯುವದಕ್ಕೂ ಅದು ಕಾರಣವೇ ಹೇಗೆ ಎಂದು ವಿಚಾರಿಸಿದ. "ಅದೆಲ್ಲಾ ಸುಳ್ಳಯ್ಯಾ, ರುಜು ಹಾಕಿರುವ ಭಾವ ಚಿತ್ರಗಳನ್ನು ಕಂಪನಿಯವರು ಉಪಯೋಗಿಸಿಕೊಳ್ಳಲು ನಟಿಯರು ಒಪ್ಪಿ ಹಣವನ್ನು ಹೊಂದಿರುತ್ತಾರೆ" ಎಂದು ತಿಳಿಸಿದ.

ಕಾಳಿಂದಿಯ ಹೆಡೆ ತುಳಿಯುತ್ತಿರುವ ಶ್ರೀಕೃಷ್ಣನ ಕೈಯಲ್ಲಿ ಎರಡೆರಡು ಗ್ರೈಪ್‌ಸಿರಪ್ ಶೀಸೆಗಳಿರುತ್ತವೆ. ಅಂತಹ ದೊಡ್ಡ ಸರ್ಪವನ್ನು ಮೆಟ್ಟುವ ಪವಾಡ ತೋರಬಲ್ಲ ಈ ಗ್ರೈಪ್‌ಸಿರಪ್ ಸೇವನೆಯಿಂದಲೇ ಕೃಷ್ಣನಿಗೆ ಸಾಧ್ಯವಾಯಿತೆಂದು ಪರ್ಯಾಯವಾಗಿ ಹೇಳಿದಂತಾಯಿತು. ಆದರೆ ಸಂಪ್ರದಾಯಶರಣರು ಈ ವಾದವನ್ನು ಒಪ್ಪುತ್ತಾರೋ ಇಲ್ಲವೋ ಹೇಳಲು ಸಾಧ್ಯವಿಲ್ಲ. ಶ್ರೀ ಕೃಷ್ಣನ ಅದ್ಭುತ ಶಕ್ತಿಗೆ ಕಾರಣ ಅವನು ಪರಮಾತ್ಮನ ಅವತಾರವಾದ್ದರಿಂದಲೇ ಎಂದು ಹೇಳುತ್ತಾರೆ. ಏನೇ ಆಗಲಿ, ಈ ಅಂಶ ಇನ್ನೂ ಜಿಜ್ಞಾಸಾವಸ್ಥೆಯಲ್ಲಿರುವುದರಿಂದ ಅದರ ಚರ್ಚೆ ಇಲ್ಲಿ ಬೇಡ. ಪಕ್ವವಾಗಿ ನಿರ್ಣಯ ಸ್ಥಿತಿಗೆ ಬಂದಾಗ ಅದನ್ನು ಪುನರಾಲೋಚಿಸೋಣ.

ನಮ್ಮ ಲಕ್ಷ್ಮಿ, ಸರಸ್ವತಿ, ಈಶ್ವರ, ವಿಷ್ಣು ಮುಂತಾದವರು ತಮ್ಮ ತಮ್ಮ ಕೆಲಸಕಾರ್ಯಗಳನ್ನು ಬಿಟ್ಟು ಕ್ಯಾಲೆಂಡರ್‌ಗಳಲ್ಲಿ ಬಂದು ನಿಂತುಕೊಳ್ಳಬೇಕಾಗಿದೆ. ಅನೇಕ ಜನ ಆಸ್ತಿಕರ ಮನೆಯಲ್ಲಿ ಈ ದೇವತೆಗಳಿರುವ ಕ್ಯಾಲೆಂಡರುಗಳು ದೇವರ ಮನೆಯಲ್ಲಿ ಪೂಜೆ ಹೊಂದುತ್ತಿರುವುದನ್ನು ನಾವು ನೋಡಬಹುದಾಗಿದೆ. ನಾವು ಪೂಜಿಸುವ ದೇವರುಗಳೂ ಸಹ ಪರದೇಶಗಳಿಂದ ಬರುತ್ತಿರುವ ಅಂಶವನ್ನು ಗಮನಿಸಿದಲ್ಲಿ ಭಾರತೀಯರ ಸಂಸ್ಕೃತಿಯ ಮಟ್ಟವನ್ನು ಬಹು ಸುಲಭವಾಗಿ ಅಳೆಯಬಹುದು.

ಷೇವಿಂಗ್ ಸಲೂನ್‌ಗಳಲ್ಲಿ ತೂಗುಹಾಕಿರುವ ಕ್ಯಾಲೆಂಡರ್‌ಗಳು ಸಾಮಾನ್ಯವಾಗಿ ಅರಬೆತ್ತಲೆಯ ಹೆಂಗಸರ ಚಿತ್ರಗಳನ್ನು ಉಳ್ಳದ್ದಾಗಿರುತ್ತವೆ. ಚೌಲಕರ್ಮಕ್ಕೂ ಸ್ತ್ರೀಯರ ನಗ್ನ ಚಿತ್ರಗಳಿಗೂ ಯಾವ ಬಾದರಾಯಣ ಸಂಬಂಧವೋ ಕಾಣೆ.

ಕ್ಯಾಲೆಂಡರುಗಳನ್ನು ಸಂಪಾದಿಸಲು ಅನೇಕರು ಬಹಳ ಶ್ರಮ

ಪಡುತ್ತಾರೆ. ಯಾವುದಾದರೂ ಅಂಗಡಿಕಾರನು ಕ್ಯಾಲೆಂಡರುಗಳನ್ನು ಅಚ್ಚು ಹಾಕಿಸಿದ್ದಾನೆಂದು ತಿಳಿದೊಡನೆಯೇ ಅವನ ಅಂಗಡಿಗೆ ತಮಗೆ ಬೇಡವಾದ ಸಾಮಾನುಗಳನ್ನು ಕೊಳ್ಳಲು ದಾಳಿ ಮಾಡುತ್ತಾರೆ ಮೊದಲು ಅವನು ಹೇಳಿದ ಬೆಲೆಗೆ ಸಾಮಾನುಗಳನ್ನು ಕೊಂಡುಕೊಂಡು ಅನಂತರ ಅಂಗಡಿಯವನ, ಅವನ ಹೆಂಡತಿಯ, ಇದ್ದ ಅಥವಾ ಇಲ್ಲದ ಮಕ್ಕಳ ಆರೋಗ್ಯವನ್ನು ವಿಚಾರಿಸಿ, ಒಂದೇ ಒಂದು ಸಾರಿ ಮುಗುಳ್ನಗೆ ನಕ್ಕು ಕ್ಯಾಲೆಂಡರಿಗೆ ಬಲೆ ಬೀಸುತ್ತಾರೆ. ಅದು ದೊರಕಿತೆಂದರೆ ಅವರಿಗೆ ಪರಮಾನಂದ. ಮನೆಯೆಲ್ಲ ತೂತು ಬೀಳುವಂತೆ ಮೊಳೆಗಳನ್ನು ಹೊಡೆದು, ಗೋಡೆಯ ಮೇಲೆ ಸ್ಥಳವಿಲ್ಲದಂತೆ ಕ್ಯಾಲೆಂಡರ್‌ಗಳನ್ನು ನೇತುಹಾಕುತ್ತಾರೆ. ಇವುಗಳಲ್ಲಿ ಒಂದನ್ನು ನೀವು ಕೇಳಿದರೂ ಅವರು ಕೊಡುವದಿಲ್ಲ. ಇಂತಹ ಜನರ ದೌರ್ಬಲ್ಯವನ್ನು ಕಂಡುಕೊಂಡ ಕೆಲವು ಕಂಪನಿಗಳವರು ತಮ್ಮ ಸಾಮಾನುಗಳನ್ನು ಕೊಂಡರೆ ಅಂದವಾದ ತ್ರಿವರ್ಣರಂಜಿತ ಕ್ಯಾಲೆಂಡರ್ ಒಂದನ್ನು ಬಹುಮಾನವಾಗಿ ಕೊಡುವದಾಗಿ ಜಾಹೀರಾತು ಮಾಡುತ್ತಾರೆ.

ಅಂತೂ ಕ್ಯಾಲೆಂಡರ್‌ಗಳು ಸಹ ನಮ್ಮ ನಿತ್ಯ ಜೀವನದಲ್ಲಿ ಎಂತಹ ಗಣನೀಯವಾದ ಪಾತ್ರವನ್ನು ವಹಿಸಿವೆಯೆಂಬುದನ್ನು ನೀವೇ ನೋಡಿ!

---

# ತಲೆಯ ತೊಡಿಗೆಗಳು

"ಸರ್ವೇಷು ಗಾತ್ರೇಷು ಶಿರಃ ಪ್ರಧಾನಂ" ಎಂಬ ಸುಭಾಷಿತದಂತೆ ನಮ್ಮ ದೇಹದಲ್ಲಿ ತಲೆ ಪ್ರಧಾನವಾದ ಅಂಗವಾಗಿದೆ. ಒಬ್ಬ ಮನುಷ್ಯನಿಗೆ ನರಮಂಡಲ ಕೆಟ್ಟಿದ್ದರೂ, ಮೆದುಳಿನ ವಿಕಾರವಾಗಿದ್ದರೂ, ಆ ಬೂದು ಪದಾರ್ಥ (ಮೆದುಳು) ದ ಅಭಾವವಾಗಿದ್ದರೂ ಅಪಕೀರ್ತಿಯೆಲ್ಲ ಇಡೀ ತಲೆಗೇ ಬಂದು "ಅವನ ತಲೆಯೇ ಕೆಟ್ಟುಹೋಗಿದೆ" ಯೆಂದು ನಿರಾಯಾಸವಾಗಿ ಹೇಳುತ್ತಾರೆ. ಒಂದು ಸಾರಿ ಒಬ್ಬ ಭಾರೀ ವಿದ್ವಾಂಸರೊಡನೆ ನಾನು ನನಗೆ ತಿಳಿಯದ ಯಾವುದೊ ಒಂದು ವಿಷಯವನ್ನು ಚರ್ಚಿಸುತ್ತಲಿದ್ದಾಗ ಒಬ್ಬ ಮಹನೀಯರು ಬಂದರು ಅವರು ದಷ್ಟಪುಷ್ಟರಿದ್ದರು. ಅವರ ತಲೆಯೆಂದರೆ ಸಾಮಾನ್ಯವಲ್ಲ. ಆರೂವರೆಯಾಣೆ ತೆಂಗಿನಕಾಯಿ ನಾಚುವಂತಿತ್ತು. ನಮ್ಮ ಚರ್ಚೆಯಲ್ಲಿ ಅವರೂ ಭಾಗವಹಿಸಿ ಅವರದೇ ಆದ ಒಂದು ವಾದವನ್ನು ಮುಂದಿಟ್ಟರು. ಅನಿವಾರ್ಯವಾಗಿ ನಾನೂ ವಿದ್ವಾಂಸರೂ ಅವರು ಹೇಳಿದುದಕ್ಕೆ ಒಪ್ಪಿದ ಮೇಲೆ ಹೊರಟುಹೋದರು. ನಾನು ಆ ವಿದ್ವಾಂಸರನ್ನು ಕೇಳಿದೆ, ಆ ಪ್ರಾಣಿಯ ವಿಷಯ. ಅವನ ತಲೆ ಕೆಟ್ಟದೆಯೆಂದು ಹೇಳಿದರು. "ಆದರೆ ತಲೆ ಸರಿಯಾಗಿದೆಯಲ್ಲ" ಎಂದು ನಾನು ಹೇಳಿದೆ. ಅವರು ಉತ್ತರ ಕೊಡದೆ ಒಳಕ್ಕೆ ಹೋಗಿ ಒಂದು ತೆಂಗಿನ ಕಾಯಿಯನ್ನು ತಂದರು. "ಏಕೆ ಏನಾಗಿದೆ, ಚೆನ್ನಾಗಿದೆ" ನಾನೆಂದೆ. "ಅದನ್ನು ಬಾರಿಸು" ಎಂದರವರು. "ಟೊಕ್ ಟೊಕ್" ಎಂದು ಉತ್ತರ ಕೊಟ್ಟಿತು. "ಸರಿ ಇದರಂತೆ ಅವನು" ಎಂದು ಉತ್ತರ ಕೊಟ್ಟರವರು.

ವಿಷಯಾಂತರ ತಪ್ಪಿಗೊಳಗಾಗಿ ನಾನು ಇಷ್ಟು ಏಕೆ ಹೇಳಬೇಕಾಯಿತೆಂದರೆ ಮನುಷ್ಯನ ತಲೆ ಸಮನಾಗಿರಬೇಕು. ಇನ್ನು ತಲೆಯಿದ್ದ ಮೇಲೆ ತಕ್ಕ ತೊಡಿಗೆಯಿಂದ ಅದನ್ನು ರಕ್ಷಿಸಿಕೊಳ್ಳದಿದ್ದರಾಗುವುದೇ? ಅರ್ಥಾತ್ ರಕ್ಷಿಸಿಕೊಳ್ಳಲೇಬೇಕು. ಹಾಗಾದರೆ ಅದನ್ನು ಈ ಆಧುನಿಕ ಯುಗದಲ್ಲಿ

ನಮ್ಮ ದೇಶದಲ್ಲಿ ರಕ್ಷಿಸಿಕೊಳ್ಳಲು ಮಾಡಿರುವ ಉಪಾಯಗಳೇನು, ಎಂದು ಎಂಬುವನ್ನು ವಿವೇಚಿಸುವುದೇ ಈ ಲೇಖನದ ಉದ್ದೇಶ

ನಮ್ಮ ದೇಶದಲ್ಲಿ ರುಮಾಲುಗಳು ಬಹಳ ಬಳಕೆಯಲ್ಲಿವೆ. ಅದರಲ್ಲಿಯೂ "ಮೈಸೂರು ಕಟ್ಟು" (ಸಾರಿನ ತ್ರಿಳಿಯಲ್ಲ) ಎಂದರೆ ಮೈಸೂರು ಸೀಮೆಯುವರು ಕಟ್ಟುವ ರುಮಾಲದ ವಿಧಾನ. ಇದಕ್ಕೆ ಜರತಾರಿ ಕಡಿಗಳಿರಬೇಕು. ಅಂದರೇ ಅದರ ಸೊಗಸು. ಎಡದಿಂದ ಬಲಕ್ಕೊಂದು ಪಟ್ಟಿಯೂ, ಬಲದಿಂದ ಎಡಕ್ಕೊಂದು ಪಟ್ಟಿಯೂ ಹೋಗಿ ಮೇಲ್ಗಡೆ ಸೇರುತ್ತವೆ ದೊಡ್ಡವೆರಡು ರಸ್ತೆಗಳು ಕೂಡಿದಂತೆ ಕಾಣುತ್ತೆ. ಇದಕ್ಕೆ ಕತ್ತರಿ ರುಮಾಲೆಂದು ಹೇಳುತ್ತಾರೆ. ಅಲ್ಲದೆ ಜಗತ್ತಿನ ಯಾವುದಾದರೂ ಭಾಗದಲ್ಲಿ ಈ ರುಮಾಲನ್ನು ನೋಡಿದರೆ ದೇವರ ಮೇಲೆ ಆಣೆ ಹಾಕಿ "ಮೈಸೂರಿನವರು" ಎಂದು ಹೇಳಬಹುದು. ಇದೊಂದು "Identification card" ಇದ್ದ ಹಾಗೆ. ಇದರಲ್ಲಿಯೇ ಇನ್ನೊಂದು ವಿಧವಿದೆ. ಅದಕ್ಕೆ "ಗುಂಡು ಸೂಜಿ ರುಮಾಲು" ಎಂದು ಹೇಳುತ್ತಾರೆ ಹೊಸದಾಗಿ ಹೈಸ್ಕೂಲಿಗೆ ಬಂದಿರುವ ಉಪಧ್ಯಾಯರುಗಳಿಗೆ ರುಮಾಲು ಕಟ್ಟಲು ಬರುವದಿಲ್ಲ. ರುಮಾಲು ಹಾಕಿಕೊಳ್ಳಬೇಕೆಂದು ಆಸೆ ಬೇರೆ! ಅದಕ್ಕೋಸ್ಕರ ಹಳೆಯ ಉಪಾಧ್ಯಾಯರಿಂದ ಒಂದು ಸಾರಿ ರುಮಾಲನ್ನು ಸುತ್ತಿಸಿಕೊಂಡು, ಅದರ ಮಡಿಕೆಗಳು ಬಿಚ್ಚದಂತೆ ಸುಮಾರು ೧೦೦-೧೫೦ ಗುಂಡು ಸೂಜಿಗಳನ್ನು ಚುಚ್ಚಿರುತ್ತಾರೆ.

ಗುಮಾಸ್ತರ ರುಮಾಲದ ಹೆಸರನ್ನು ನೀವು ಕೇಳಿರಬಹುದು. ಇದಕ್ಕೆ ನಾನು ಶಿಂಬೆ ರುಮಾಲವೆಂದು ಹೇಳುತ್ತೇನೆ. ತಲೆಯ ಮೇಲ್ಭಾಗವೆಲ್ಲಾ ಕಾಣುವಂತೆ ಎಡದಿಂದ ಬಲಕ್ಕೆ ಬಲದಿಂದ ಎಡಕ್ಕೆ ಒಂದು ಬ್ಯಾಂಡೇಜ್ (ಪಟ್ಟಿ) ಕಟ್ಟಿದಂತಿರುತ್ತೆ. ಇದರ ಹೆಚ್ಚಿನ ಉಪಯೋಗ, ಲೇಖಣಿ ಸಿಕ್ಕಿಸಿಕೊಳ್ಳುವುದೇ ಎಂದು ತಿಳಿದು ಬಂದಿದೆ.

ಆಂಧ್ರಪ್ರಾಂತ್ಯ ಮತ್ತು ಬಳ್ಳಾರಿ, ಹೊಸಪೇಟೆ ಕಡೆಗೆ ರುಮಾಲು ಕಟ್ಟುವ ವಿಧಾನ ಬಹುಮಟ್ಟಿಗೆ ಮೈಸೂರಿನ ತರಹೆಯನ್ನು ಹೋಲುತ್ತದೆ. ಆದರೂ ಒಂದು ದೊಡ್ಡ ವ್ಯತ್ಯಾಸವು ಒಡೆದು ಮೂಡಿ ಕಾಣುತ್ತದೆ. ಏನೆಂದರೆ ಮೈಸೂರು ಕಟ್ಟಿನಲ್ಲಿ ದಾರಿಗೆಳೆರಡೂ ಸೇರುತ್ತವೆ. ರೈಲ್ವೆ ಕಂಬಿ

ಗಳನ್ನು ನೀವು ನೋಡಿಲ್ಲವೆ? ಯಾವುದೋ ಒಂದು Point ನಲ್ಲಿ ಅವು ಸೇರುತ್ತವೆ. ಅದಕ್ಕೆ 'Laws of perspective' ಎಂದು ಹೇಳುತ್ತಾರೆ. ಆದರೆ ಬಳ್ಳಾರಿಯವರು ಕಟ್ಟು ಟಗರಿನ ಕೊಂಬಿನಂತೆ ತಿರುಗುತ್ತವೆ. ಹಿಂದುಗಡೆ ತುರುಬಿರುವದಿಲ್ಲ. ಅಲ್ಲಿಯೇ ಸ್ವಲ್ಪ ಜೊಳ ಜೊಳ ಅನಿಸುತ್ತೆ.

ಉತ್ತರ ಕರ್ನಾಟಕದವರ ರುಮಾಲದ ಕಡೆ ನಮ್ಮ ಲಕ್ಷ್ಯವನ್ನು ಹೊರಳಿಸೋಣ ಅವು ನಾನಾ ಬಣ್ಣಗಳಿಂದ, ಜರತಾರಿಗಳಿಂದ, ಅರಳೀ ಪೇಟಿ, ಧರ್ಮಾವರಂ, ಕೊಯಮುತ್ತೂರು ಸೀರೆಗಳನ್ನು ಮೀರಿಸುತ್ತವೆ. ಕಟ್ಟುವದಕ್ಕೆ ವಿಧಾನವೇನೂ ಇರುವಂತೆ ತೋರುವದಿಲ್ಲ ಅಂತೂ ಸುತ್ತಿಕೊಂಡಿರುತ್ತಾರೆ. ಇದರಲ್ಲಿ ಇನ್ನೊಂದು ಮಹತ್ವವಿದೆ. ಎರಡು ಕಿವಿಗಳನ್ನು ಸಂಪೂರ್ಣವಾಗಿ ಮುಚ್ಚಿರುವುದರಿಂದ ಹಿಂದುಗಡೆ ೨ ಟನ್ ಲಾರಿಯು ಎಷ್ಟು ಹಾರನ್ ಮಾಡಿದರೂ ಅವರಿಗೆ ಕೇಳಿಸುವದಿಲ್ಲ.

ಮಾರ್ವಾಡಿಗಳ ರುಮಾಲನ್ನು ಪುರಾಣಪುರುಷ ಹನುಮಂತನ ಬಾಲಕ್ಕೆ ಹೋಲಿಸಬಹುದು. ಏಕಾಂಗಿಗಳಾಗಿ ವ್ಯಾಪಾರಕ್ಕೆ ಹೊರಟ ಅವರಿಗೆ ನೀರಿನ ಅನಾನುಕೂಲತೆಯಾದರೆ ಬಳಿಯಲ್ಲಿಯೇ ಇರುವ ತಂಬಿಗೆಗೆ ರುಮಾಲನ್ನು (ಹಗ್ಗವನ್ನಾಗಿ) ಕಟ್ಟಿ ನೀರು ಸೇದಲು ಉಪಯೋಗಿಸುತ್ತಾರೆಂದು ಕೇಳಿದ್ದೇನೆ ಈ ರುಮಾಲು ಮಾರ್ವಾಡಿಯ ತಲೆಯ ಎಷ್ಟೋ ಭಾಗ ದೊಡ್ಡದಿರುತ್ತದೆ. ಆದುದರಿಂದಲೇ ಏನೋ, ಮಾರ್ವಾಡಿಗೆ ಬಡ್ಡಿ ಬಿಡಲು ಕೇಳಿಕೊಂಡಾಗ ಅವನ ತಲೆಗೇ ಹತ್ತುವುದಿಲ್ಲ. ನಿಜ, ಅಷ್ಟು ದೊಡ್ಡ ರುಮಾಲನ್ನು ತೂರಿಕೊಂಡು ಅವನ ತಲೆಗೆ ಹೇಗೆ ತಗಲಬೇಕು?

ರುಮಾಲಿನಲ್ಲಿ ಮಿಲಿಟರಿ ಕಟ್ಟು ಬೇರೆ. ಇದನ್ನು ಒಂದು ಪಕ್ಕಕ್ಕೆ ಕಟ್ಟಿ, ಇನ್ನೊಂದುಪಕ್ಕಕ್ಕೆ ಮೆಟ್ಟಿಲುಗಳನ್ನು ಮಾಡುತ್ತಾರೆ. ಮೇಲ್ಗಡೆ ನಾಗರಹಾವಿನ ಹೆಡೆಯಹಾಗೆ ಒಂದು ಕುಚ್ಚು ಇದ್ದರೆ ಇದಕ್ಕೆ ಹೆಚ್ಚಿನ ಕಳೆ ಬರುತ್ತೆ.

ಹೀಗೆಯೇ ರುಮಾಲುಗಳಲ್ಲಿ ಇನ್ನೂ ಎಷ್ಟೋ ವಿಧಗಳಿವೆ. ಇನ್ನು ಟೋಪಿಗಳ ಬಗ್ಗೆ ಸ್ವಲ್ಪ ನೋಡೋಣ.

ಬೊಂಡಾ (ಅಂಬಡೆ) ಟೋಪಿ. ಇದು ಉಣ್ಣೆಯದು. ಒಂದು ದೊಡ್ಡ

ಕೊಳಗದಂತಿದ್ದು ಮೇಲ್ಗಡೆ ಒಂದು ಬೋಂಡಾ (ಇದು ತಿನ್ನುವುದಕ್ಕೆ ಬರುವುದಿಲ್ಲ) ಇರುತ್ತೆ. 'ನೋಬಲ್' ಟೋಪಿಯ ಹೆಸರೇನೋ ಚೆನ್ನಾಗಿದೆ, ಇದು ಉಣ್ಣೆಯ ಟೋಪಿಯೇ ಮೇಲ್ಗಡೆ ಮಾತ್ರ ಸ್ವಲ್ಪ ಅಗಲವಾಗಿರುತ್ತೆ 'ಮಿಜಾರ್' ಟೋಪಿ (ಈ ಹೆಸರು ಹೇಗೆ ಬಂತೆಂಬುದರ ಬಗ್ಗೆ ಸಂಶೋಧನೆ ನಡೆಸುತ್ತಲಿದ್ದೇನೆ) ಸ್ವಲ್ಪ ಹೆಚ್ಚು ಕಡಿಮೆ ಬೋರಲು ಹಾಕಿದ ಪಿರಮಿಡ್‌ನ ಹಾಗೆ ಇರುತ್ತೆ. "ಗಂಧರ್ವ" ಟೋಪಿ ಇದು ಮಡಿಸಲು ಬರುವ ಉಣ್ಣೆಯ ಟೋಪಿ ನಾಟಕದ ಗಂಧರ್ವ ಇದನ್ನು ಉಪಯೋಗಿಸುತ್ತಿದ್ದನೋ ಯಕ್ಷ ಕಿನ್ನರ ಗಂಧರ್ವರು ಉಪಯೋಗಿಸುತ್ತಿದ್ದರೋ, ತಿಳಿಯದು ಮೊದಲಿಗೆ ಇವರ ಅಗಲ ಹೆಚ್ಚಾಗಿದ್ದಷ್ಟು ಚೆನ್ನಾಗಿರುತ್ತದೆ ಯೆಂದು ಹೇಳುತ್ತಿದ್ದರು. ಆದರೆ ಈಗ ಈ ಟೋಪಿಯ ಅಗಲ ೩ ಬಟ್ಟುಗಳಗಿಂತ ಹೆಚ್ಚಾಗಿರಕೂಡದೆಂದು ಹೇಳುತ್ತಾರೆ. ಆದರೆ ನಾಟಕದಲ್ಲಿನ ಸ್ತ್ರೀಪಾತ್ರಗಳನ್ನು ನಿರ್ವಹಿಸುವ ಪುರುಷರು ಮಾತ್ರ ಬಹಳ ಅಗಲವಾದ ಗಂಧರ್ವ ಟೋಪಿಗಳನ್ನು ಬಳಸುತ್ತಾರೆ. ಏಕೆಂದರೆ ತಲೆಯ ಕೂದಲನ್ನೆಲ್ಲ ಪೇರಿಸಿ ಆ ದೊಡ್ಡ ಟೋಪಿಯಲ್ಲಿ ಅಡಗಿಸಲು ಅನುಕೂಲವಾಗುತ್ತದೆ.

ಹಾಸನ ಟೋಪಿಯು ಈಗ ಬಹುಮಟ್ಟಿಗೆ ಬಳಕೆಯಲ್ಲಿ ಇಲ್ಲವೆಂದು ಹೇಳಬಹುದು. ಇವು ಕೆಂಪು ಮತ್ತು ದುಂಡನೆಯ ಟೋಪಿಗಳು ಟೋಪಿಗಳಲ್ಲೆಲ್ಲ ಅಗ್ಗವಾದ ಟೋಪಿಯೆಂದರೆ "ಗಾಂಧಿ ಟೋಪಿ". ಇದು ಬಹಳ ಅಲ್ಪ ಬೆಲೆಗೆ ದೊರೆಯುತ್ತೆ. ಆದರೆ ಒಂದಾನೊಂದು ಕಾಲದಲ್ಲಿ ಈ ಟೋಪಿಯು ಬಹಳ ಅಪಾಯಕರವಾಗಿತ್ತು. ಇದನ್ನು ಹಾಕಿಕೊಂಡರೆ ಕೃಷ್ಣಜನ್ಮಸ್ಥಾನವನ್ನು ಕಾಣಬೇಕಾಗಿತ್ತು. ಆ ಸಂದರ್ಭದಲ್ಲಿ ಹೌಸ್ ಆಫ್ ಪಾರ್ಲಿಮೆಂಟಿನಲ್ಲಿ ಫೆನ್ನರ್ ಬ್ರಾಕ್‌ವೆ ಮಹಾಶಯನು ಗಾಂಧಿಟೋಪಿಯನ್ನು ಹಾಕಿಕೊಂಡಿದ್ದನು ಎಲ್ಲ ತರಹೆ ಟೋಪಿಗಳಿಗಿಂತ ಈ ಟೋಪಿಗೆ ಅನೇಕ ಐತಿಹ್ಯಗಳು ಅಂಟಿಕೊಂಡಿವೆ.

ಆದರೆ ಇತ್ತೀಚಿಗೆ ತಲೆಯನ್ನು ಯಾವ ತರಹ ತೊಡಿಗೆಯಿಂದಲೂ ರಕ್ಷಿಸಿಕೊಳ್ಳದೆ ಬಕ್ಕತಲೆಯಿಂದ ಓಡಾಡುವ ರೂಢಿಯು ಹೆಚ್ಚಾಗುತ್ತಲಿದೆ. ಇದಕ್ಕೆ ಬಹು ಮುಖ್ಯವಾಗಿ ತಲೆಯ ಮೇಲೆ ದಟ್ಟವಾದ ಕ್ರಾಪ್

ಇರಬೇಕು. ಈ ಕ್ರಾಪ್ ಎಂತಹ ಮಳೆ, ಬಿಸಿಲುಗಳನ್ನಾದರೂ ತಡೆಯ ಬಲ್ಲುವಂತೆ.

ಸಂಪೂರ್ಣವಾಗಿ ಆಂಗ್ಲರೀತ್ಯಾ ಉಡುಪು ಧರಿಸುವವರು ಹ್ಯಾಟ್ ಹಾಕುತ್ತಾರೆ. ಇವುಗಳ ಬಗ್ಗೆ ನನಗೇ ಏನೂ ತಿಳಿಯದಿರುವುದರಿಂದ ಇದನ್ನು ಇಲ್ಲಿಗೆ ಬಿಡುತ್ತೇನೆ.

ಟೋಪಿಯ ಬಗ್ಗೆ ಒಂದು ವಿಷಯ ಹೇಳುವುದು ಮರತೆ ಏನೆಂದರೆ ಯಾವುದಾದರೂ ಮೋಸದ ವ್ಯಾಪಾರಕ್ಕೆ "ಟೋಪಿ" ವ್ಯಾಪಾರ ಅನ್ನುತ್ತಾರೆ ಮೋಸಕ್ಕೂ ಟೋಪಿಗೂ ಏನು ಸಂಬಂಧವೋ ನನಗೇ ಗೊತ್ತಿಲ್ಲ

"ಕಾಲಾಯ ತಸ್ಮೈ ನಮಃ" ಹೀಗೆಯೇ ಕಾಲಗತಿಗನುಸಾರವಾಗಿ ಏನೇನೋ ಬದಲಾವಣೆಗಳಾಗುತ್ತಿವೆ